# ANTARANGA

# ಅಂತರಂಗ

KANARESE WEEKLY MAGAZINE

ಕನ್ನಡ ವಾರ ಪತ್ರಿಕೆ - - ಉಡುಪಿ

PROPRIETORS:
SUPPY AGNCY LIMITED, UDIPI.
PRINTED AT THE
MANIPAL POWER PRESS, UDIPI.

ವರ್ಷ ೧ ] ✠ [ ಸಂಚಿಕೆ ೨೩

ಆದಿತ್ಯವಾರ, ದಶಂಬರ ೧೮, -'೩೮




**ವಾರ್ಷಿಕ ಚಂದಾ: ಮೂರು ರೂಪಾಯಿ.**
**ಬಿಡಿ ಸಂಚಿಕೆ: ಒಂದಾಣೆ**

**ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.**

## FOR SALE.

10 Shares of the POPULAR INSURANCE COMPANY Limited, Mangalore (Rs. 10/- paid up) 10 Shares (Rs. 15 paid up) of KARNATAKA BANK LTD. are for sale. Please apply to:

*Brokerage Department*

SUPPLY AGENCY LTD
UDIPI.

---

The present agency of ANTARANGA at KALLIANPUR has been cancelled since the last week. Hence, customers who wish to have the future copies of ANTARANGA may please communicate to this office directly.

*Circulation Manager,*
ANTARANGA.

---

**ಎಲ್ಲ ಕಡೆಗೆ ಏಜಂಟರು ಬೇಕು.**

## "ಚಿತ್ರ ಸಮಾಚಾರ್"

(ಕನ್ನಡ)

**ಚಲನಚಿತ್ರ ಮಾಸಪತ್ರಿಕೆ**

ಅಖಿಲ ಕರ್ನಾಟಕದಲ್ಲಿ ವಿವಿಧ ಚಲನಚಿತ್ರಗಳ ಸುದ್ದಿ
ಯಿಂದಲೂ ಚಲನಚಿತ್ರದ ನಟ-ನಟಿಯರ
ಚಿತ್ರಗಳಿಂದಲೂ, ಲೇಖನಗಳಿಂದಲೂ ಕೂಡಿ

ಪ್ರತಿ ತಿಂಗಳಲ್ಲಿ ಎಲ್ಲರ ಕರಗಳಲ್ಲಿ
ರಾರಾಜಿಸುತ್ತಿರುತ್ತದೆ.

**ಬಿಡಿ ಪತ್ರಿಕೆ ಒಂದಾಣೆ ಮಾತ್ರ.**

ಚೀಫ್ ಏಜಂಟ್ಸ್:

**ಪೊಪ್ಯುಲರ್ ಎಡ್ವರ್ಟೈಜಿಂಗ್ ಬ್ಯೂರೊ,**
**ಧಾರವಾಡ.**

---

SRI NARAYANACHAR News Agent, CHANNAPATNA is exclusively authorised to sell ANTARANGA on his own account at CHANNAPATNA with effect from the 2nd week of December 1938.

*Circulation Manager,*
ANTARANGA.

# ಅಂತರಂಗ

## ತುಂತುರು

ಮಲಬಾರು ದೇವಸ್ಥಾನ ಪ್ರವೇಶ ಮಸೂದೆಯು ಕಾಯಿದೆಯಾಯ್ತು.

**ರಾಷ್ಟ್ರಪತಿ ಬೋಸ್**



ಕೇವಲ ಟೈಪ್‌ರೈಟರಿನ ಅಕ್ಷರಗಳಿಂದಲೇ ತಯಾರಿಸಿದ ಚಿತ್ರವಿದು. ಲಕ್ಷ್ಮೀ ಇನ್ಶೂರೆನ್ಸ್ ಕಂಪೆನಿಯ ಏಜೆಂಟರೂ, ಉಡುಪಿಯ ತರುಣ ಉತ್ಸಾಹಿಗಳೂ ಆದ ಶ್ರೀ. ಬಿ. ಕೃಷ್ಣಯ್ಯನವರು ಇದನ್ನು ತಯಾರಿಸಿದ್ದಾರೆ.

ಇತರ ಜಿಲ್ಲೆಗಳ ದೇವಸ್ಥಾನಗಳ ಕವಗಳ ಕೀಲಿಯೂ ಸಡಿಲಾಗಬಹುದೆಂದು ನಿರೀಕ್ಷಿಸಬಹುದೆ?

೦೦೦

ದಕ್ಷಿಣ ಕನ್ನಡವು ಸ್ಪೈನನ್ನು ಅನುಕರಿಸುತ್ತಿದೆಯೆಂದು ವಾರ್ತೆ!

ವಿದ್ರೋಹಿ ಜನರಲ್ ಫ್ರೇಂಕೊನಿಗೆ ಮುಸ್ಸೋಲಿನಿ ಬೆಂಬಲವೀಯುವುದಾದರೆ ದಕ್ಷಿಣಕನ್ನಡದಫ್ರೇಂಕೋನಿಗೆ 'ಸೀನರ್ ಚೆಕ್ ಬುಕ್' ಬೆಂಬಲವೀಯುತ್ತಿರಬಹುದು!

೦೦೦

ಹರಿಪುರದ ಸಂಸ್ಥಾನಗಳ ನಿರ್ಣಯವು ಬದಲಾಗದೆ ಗತ್ಯಂತರವಿಲ್ಲವೆಂದು ಹಲವು ಧುರೀಣರ ವಾದ.

ನಿರ್ಣಯವು ಬದಲಾಗದಿದ್ದರೆ ಕಾರ್ಯದ ಗತಿಯು ವ್ಯತ್ಯಾಸವಾಗುವುದು ನಿಜವಾಗಿರುವಾಗ ಆ ಕುರಿತು ಗೊಂದಲವೇಕೆ?

೦೦೦

ಅಸ್ಸಾಮಿನ ಅವಿಶ್ವಾಸ ಠರಾವಿನ ಶ್ವಾಸವು ಹಾರಿ ಹೋದುದರಿಂದ ಯುರೋಪಿಯನರ ಉಸಿರುಕಟ್ಟಿ ಹೋಗಿದೆಯಂತೆ.

ಏನಾಯಿತು? ಸುಭಾಷಬೋಸರ "ಸೃಷ್ಟಿ" ಉಳಿದುದುಕ್ಕೆ ಅವರು ಹಿರಿಹಿಗ್ಗಲಿಲ್ಲವೆ? ಹುಲಿಗೆ ನಷ್ಟವಾದರೆ ದನಕ್ಕೆ ಲಾಭ!

೦೦೦

'ಸ್ವತಂತ್ರಭಾರತವು ದೇವಿ-ಮಲ್ಯರ ಪತ್ರಿಕೆ'ಯೆಂದು 'ತ್ರಿಶಂಕು ಸ್ವರ್ಗದ ಧುರೀಣ'ರೊಬ್ಬರ ಓರೆನೋಟದ ಮಾತು.

'ಗಾಳಿಯ ಕೋಳಿ' ಪಶ್ಚಿಮಕ್ಕೆ ತಿರುಗಿದಾಗ ಕಂಡ ನೋಟವಿದು. ಪೂರ್ವದಲ್ಲಿದ್ದಾಗ 'ಅದಕ್ಕೆ' ಬೇರೆಯೇ ದೃಶ್ಯಕಂಡಿರಬಹುದು!

---



# ಮಂಗಳ

ನಮ್ಮ ನಿರೀಕ್ಷೆಯು ಆಧಾರರಹಿತ ವಾಗಿ ಪರಿಣಮಿಸಿತು!

***

**ಭೀಕರ ಪ್ರಾಣಿ!**

"ಉಲಾ, ಉಲಾ, ಉಲಾ, ಉಲಾssss" ಕಿವಿಯೊಡೆಯುವ ಆ ಕೂಗನ್ನು ಕೇಳಿ ನಮಗೆ ನಡು ಕವುಂಟಾಯಿತು. ಕೆಲವರು ಭಯ ದಿಂದ ಚೀರಿಬಿಟ್ಟರು. ಉರುಟುರು ಟಾದ ದೇಹ! ಅತ್ಯಂತ ದೊಡ್ಡ ದಾದ ಕರಡಿಯಂತೆ ಕಾಣಿಸು ತಿತ್ತು! ಉದ್ದವಾದಗುಡಾಣದಾಕಾರದ ಕೊಳವೆಯಿಂದ ಆ ವಿಚಿತ್ರ ಪ್ರಾಣಿಯು ಹೊರಗೆ ಬಂದದ್ದೇ ತಡ. ಸೂರ್ಯರಶ್ಮಿಯು ಅದರ ಮೈಮೇಲೆ ಬಿತ್ತು. ಮೈಯ್ಯೆಲ್ಲಾ ಮಿನುಗುತ್ತಿತ್ತು. ಹೊಳೆಯುವ ಲೋಹದಂತೆ ಝಗಝಗಿಸು ತಿತ್ತು. ಅದೋ, ಆ ಪ್ರಾಣಿಯು ಮುಂದೆ ಬಂತೇ ಬಂತು! ದೊಡ್ಡ ಬಟ್ಟಲಿನಾಕಾರದ ಹೊಳೆಹೊಳೆವ ಕಣ್ಣುಗಳು! ನೋಡಲಸಾಧ್ಯವಾಗು ವಂತಹ ಎವೆಯಿಕ್ಕದೆ ನೋಡುವ ನೋಟ! ಆ ಕಣ್ಣುಗಳ ಕೆಳಗೆ ಬಹಳ ಅಗಲವಾದೊಂದು ಬಾಯಿ! ಆದರೆ ತುಟಿಗಳಿಲ್ಲ! ನೀಳವಾದ ನಾಲಗೆಯಿಂದ ಧಾರೆಧಾರೆಯಾಗಿ ಎಂಜಲು ಸುರಿಯುತ್ತಿದೆ! ಇಡೀ ದೇಹವು ಉಸಿರಾಡುವಾಗ ಬುಸು ಗುಟ್ಟುತ್ತಿತ್ತು.

***

**"ಉಲಾ, ಉಲಾ, ಉಲಾ"**

"ಉಲಾ, ಉಲಾ, ಉಲಾ, ಉಲಾ!" ಕರ್ಣ-ಕಠೋರವಾದ ವಿಚಿತ್ರಶಬ್ದ! ಆಕಾಶದಿಂದ ಭೂಮಿಯ ಮೇಲೆ ಬಿದ್ದಿದ್ದ ಆ ವಿಚಿತ್ರವಸ್ತುವನ್ನು ಯಾರೂ ಲಕ್ಷಿಸಿದ್ದಿಲ್ಲ. ಮರುದಿನ ಬಹಳ ವಿಶಾಲವಾದ ಮರಳರಾಶಿಯ ಬಳಿಯಲ್ಲಿ ನೂರಾರು ಜನರು ನೆರೆ ದಿದ್ದಾರೆ. ಬಹು ದೊಡ್ಡದೊಂದು 'ವಸ್ತು' ಮರಳಿನಡಿಯಲ್ಲಿ ಮಲಗಿ ಕೊಂಡಂತೆ ಕಾಣಿಸುತ್ತಿತ್ತು. ಒಂದು ಭಾಗವನ್ನು ಮರಳಿನೆಡೆಯಿಂದ ನೋಡಬಹುದಾಗಿತ್ತು. ದೂರ ದಿಂದ ನೋಡುವಾಗ ಅದು ಬಹಳ ದೊಡ್ಡದಾದೊಂದು ಗುಡಾಣದಂತೆ ಕಾಣುತ್ತಿತ್ತು. ಕರಿಬೂದು ಬಣ್ಣ! ನಾವೆಲ್ಲರೂ ಮರಳರಾಶಿಯ ಬದಿ ಯಲ್ಲಿ ನಿಂತುಕೊಂಡಿದ್ದಂತೆಯೇ ಪುನಃ ಆ ಕೂಗು ಕೇಳಿಸಿತು. "ಉಲಾ, ಉಲಾ" ನೂರಾರು ಸಿಂಹಗಳು ಕೂಡಿ ಘರ್ಜಿಸಿದಂತೆ ಆ ಭಯಂಕರ ಕೂಗು ಎಲ್ಲೆಡೆಗ ಳಲ್ಲಿಯೂ ಪ್ರತಿಧ್ವನಿಸಿತು. ಅರೆ ಕ್ಷಣದಲ್ಲಿಯೇ ಆ ಮಹಾ ಗುಡಾಣ ದೊಳಗಿನಿಂದ ಒಂದು ಪ್ರಾಣಿಯು ಹೊರಬರುವಂತೆ ಕಂಡಿತು. ಮನುಷ್ಯಜೀವಿಯಾಗಿರಬಹುದೆಂಬ

**ನೋಡಿದರೆ ನಡುಕ.**

ಮಂಗಳಗ್ರಹದ ಮಂಗಳೀಯ ನನ್ನು ಹಿಂದೆಂದೂ ಕಾಣದವರಿಗೆ ಆ ರೂಪವು ಹೇಗಿರಬಹುದೆಂದು

# ಗ್ರಹದವರು ಭೂಮಿಗೆ ಬಂದಾಗ-

## ಅಮೇರಿಕವನ್ನು ನಡುಗಿಸಿದ ರೋಮಾಂಚಕ ಕಥೆ.

**ಯಚ್. ಜಿ. ವೆಲ್ಸರ "ಲೋಕಗಳ ಸಮರ"**

ಪ್ರಸಿದ್ಧ ಗ್ರಂಥಕರ್ತರಾದ ಮಿ. ಯಚ್. ಜಿ. ವೆಲ್ಸರು ಬರೆದ "The War of the Worlds" ಎಂಬ ಪುಸ್ತಕದ ರೇಡಿಯೋ ರೂಪಾಂತರವನ್ನು ಅಮೇರಿಕದಲ್ಲಿ ಬ್ರಾಡ್‌ಕಾಸ್ಟ್ ಮಾಡಿದಾಗ ಸಾವಿರಾರು ಜನರು ಭಯಗ್ರಸ್ತರಾಗಿ, ಜಗತ್ತಿನ ಅವಸಾನ ಕಾಲವು ಸಮೀಪಿಸಿತೆಂದು ನಡುಗಿದರು. ಮಂಗಳ ಗ್ರಹದ ಜನರು ಭೂಲೋಕಕ್ಕಿಳಿದು ಸಾವಿನ ಮಳೆಗರೆಯಲಿರುವರೆಂದು ಭಾವಿಸಿ ಮರುಗಿದರು. ಆ ಕಥೆಯ ಸಾರಾಂಶವನ್ನು ಕೆಳಗೆ ಕೊಡಲಾಗಿದೆ.



ಭಾವಿಸುವುದೇ ಪ್ರಯಾಸವಾಗಿದೆ. V ಈ ಆಕಾರದ ಬಾಯಿ, ಮೇಲ್ಮುಖವಾಗಿರುವ ತುಟಿಗಳಿಲ್ಲದ ಅವರ ಕವಾಟ, ಹುಬ್ಬುಗಳಿಲ್ಲದ ವಿಚಿತ್ರ ಹಣೆ, ಎಡೆಬಿಡದೆ ನಡುಗುತ್ತಿರುವ ಬಾಯಿ, ಮುಖದಿಂದ ದಂತಗಳಂತೆ ಹೊರಗೆ ಬಂದಿರುವ ಕೊಂಬುಗಳು, ಉಸಿರಾಡುವಾಗ ಆ ವಿಚಿತ್ರ ಎದೆಯ ಪ್ರಚಂಡ ಏರಿಳಿತಗಳು, ಭಾರವಾದ ಹೆಜ್ಜೆಗಳು, ಮದ್ದಾನೆಯ ನಡೆ, ಇವೆಲ್ಲಕ್ಕಿಂತಲೂ, ಹೊಳೆಯುತ್ತಿರುವ ಆ ಕಣ್ಣುಗಳ ಕುಕ್ಕುವ ಪ್ರಕಾಶ, ಇವೆಲ್ಲವೂ ಆ ಜೀವಿಯ ಭೀಕರತೆಯನ್ನು ಹೆಚ್ಚಿಸಿದ್ದುವು. ನೋಡುವಾಗ ಜುಮ್ಮೆನಿಸುವಂತೆ ಮಾಡುತ್ತಿದ್ದವು.

* * *

### ಅದೋ ಮಾಯವಾಯಿತು!

ಅಷ್ಟು ವಿಶಾಲದೇಹದ ಮಂಗಳೀಯ! ಹೌದು! ಮಂಗಳ ಗ್ರಹದ ಮಂಗಳೀಯ! ಅರೆಕ್ಷಣದಲ್ಲಿ ಮಂಗಳೀಯನಿಲ್ಲ! ಇಲ್ಲ! ಅನಿರೀಕ್ಷಿತವಾಗಿ ಮಾಯವಾಯಿತು! ಆ ಕೊಳವೆಯು ಮೇಲೆ ಹತ್ತಿ ಸಮೀಪದಲ್ಲಿದ್ದ ಆಳವಾದೊಂದು ಬಾವಿಗೆ ಬಿತ್ತು! ಬಹು ದೊಡ್ಡ ಚರ್ಮದರಾಶಿಯನ್ನು ಆಕಾಶದಿಂದ ಕೆಳಗುರುಳಿಸಿದ ಶಬ್ದವಾಯಿತು! ಹಿಂದೆಂದೂ ಕೇಳಿಸದ ವಿಚಿತ್ರವಾದ ಕರ್ಕಶ ಸ್ವರವೊಂದು ಕೇಳಿಸಿತು! ಮರುಕ್ಷಣದಲ್ಲಿಯೇ ಆ ಗುಡಾಣದ ಕಗ್ಗತ್ತಲೆಯೊಳಗಿನಿಂದ ನಾಲ್ಕೈದು "ಪ್ರಾಣಿ"ಗಳು ಹೊರಗೆ ಬಂದುವು.

* * *

### ಬಿರುಗಾಳಿ, ಸಿಡಿಲು!

ಘುಡ್ ಘುಡ್ ಘುಡೀರ್! ಸಿಡಿಲು! ಮಿಂಚು, ತಡೆಯಲಾರದ ಬಿರುಗಾಳಿ! ಮರಗಳು ತರಗೆಲೆಗಳಂತೆ ವಾತಾವರಣದಲ್ಲಿ ಸಿಕ್ಕುಬಟ್ಟೆ ಹಾರುತ್ತಿವೆ. ಈ ಪ್ರಚಂಡ ಅವ್ಯವಸ್ಥೆಯ ಮಧ್ಯದಲ್ಲಿ, ಕತ್ತಲಲ್ಲಿ ಆ ಮಂಗಳೀಯ ಮೂರ್ತಿಯು ನನಗೆ ಕಾಣಿಸಿತು! ಅಯ್ಯೋ, ಆ ವಿಚಿತ್ರ ರೂಪವನ್ನು ವಿವರಿಸುವುದಾದರೂ ಹೇಗೆ? ಮೂರುಕಾಲಿನ ಪ್ರಾಣಿ! ಅತ್ಯಂತ ಎತ್ತರದ ಮನೆಗಿಂತಲೂ ಎತ್ತರವಾದ ಆ ದೇಹ! ಮರಗಳ ಮೇಲೆ ಹೆಜ್ಜೆಯಿಡುತ್ತಿದೆ! ಮುನ್ನಡೆಯುವಾಗ ಹುಲ್ಲನ್ನು ಹಿಡಿದೆಸೆದಂತೆ ಸಿಕ್ಕುಬಟ್ಟೆ ಕಿತ್ತು ಬಿಸುಡುತ್ತಿದೆ! ಝುಗ್ಗನೆ ಹೊಳೆಯುವ ಲೋಹದೇಹದ ಬೃಹತ್ ಯಂತ್ರವು ನಡೆದಂತೆ ಕಾಣಿಸುತಿತ್ತು! ಸಿಡಿಲಿನ ಎದೆನಡುಗಿಸುವ ಸ್ವರವು ಸಾಲದುದಕ್ಕೆ ಆ ಹೆಜ್ಜೆಗಳ ಭಯಂಕರ ಶಬ್ದ! ಕಾಲಿನಿಂದ ಮನೆಗಳನ್ನು ಕೆಡವಿ ದಾರಿಮಾಡಿಕೊಂಡು ಮುನ್ನಡೆಯಿತಾಪ್ರಾಣಿ! ಅದರ ಕಾಲುಗಂಟುಗಳಿಂದ ಹಸುರು ಬಣ್ಣದ ಹೊಗೆಯು ಏಕಪ್ರಕಾರವಾಗಿ ಹೊರಬರುತ್ತಿತ್ತು.

* * *

### ಯುದ್ಧ!

ಇಡೀ ರಾತ್ರಿ ಆ ಮಂಗಳೀಯರು ತಮ್ಮ ಕಾರ್ಯಕ್ರಮವನ್ನು ಚರ್ಚಿಸಿಕೊಂಡಿರಬೇಕು! ಮರುದಿನ ಬೆಳಗ್ಗೆ ಮಾನವರೆಲ್ಲರೂ ಒಂದಾಗಿ ಈ ಗಂಡಾಂತರವನ್ನು ಎದುರಿಸಲನುವಾದರು! ಲಕ್ಷೋಪಲಕ್ಷ ಕೋವಿಗಳ ನೋಟವು ಮಂಗಳೀಯರೆದೆಗೆ ಹೊಡಲ್ಪಟ್ಟಿತು. ಐದು ಮಂಗಳೀಯರು ಹಾರುವ ಪಕ್ಷಿಗಳಷ್ಟು ವೇಗದಿಂದ ನಮ್ಮ

(೪೭ನೇ ಪುಟ ನೋಡಿ.)

# ಯುದ್ಧ ಪೀಡಿತ ಚೀನದಲ್ಲಿ

## ೧೦,೦೦೦ ಕುಲೀನ ಲಲನೆ

### "ದೇವ ಸಂಭೂತ

### ಜಪಾನ್ ಪ್ರಜೆಗಳ

### ಚೀನಕ್ಕೆ ವಿಜಯವು



ಚೀನದ ಸ್ವಾತಂತ್ರ್ಯ ಸಂರಕ್ಷಣೆಗಾಗಿ ನಡೆಸಲ್ಪಡುತ್ತಿರುವ ಸಂಗ್ರಾಮದ ಧುರೀಣತೆಯನ್ನು ವಹಿಸಿರುವ ಕೆಚ್ಚೆದೆಯ ವೀರ **ಮಾರ್ಷಲ್ ಚಿಯಾಂಗ್ ಕೈಶೇಕ್.**

**ಮಿ| ಯಚ್. ಜೆ. ಟಿಂಪರ್ಲ್ಲಿಯವರು "What War means" ಎಂಬ ಪುಸ್ತಕದಲ್ಲಿ ಚೀನಾ-ಜಪಾನ್ ಯುದ್ಧದ ಭೀಕರಾವಸ್ಥೆಯನ್ನು ಹೃದಯಂಗಮವಾಗಿ ವಿವರಿಸಿದ್ದಾರೆ. ಈ ಲೇಖನದಲ್ಲಿ ಅದರ ಕೆಲವಂಶವನ್ನು ಆರಿಸಿಕೊಡಲಾಗಿದೆ.**

●

ಒಂದೂವರೆ ವರುಷದಿಂದ ಚೀನ ಜಪಾನುಗಳೊಳಗೆ ಭಯಂಕರ ಯುದ್ಧವು ನಡೆಯುತ್ತಿದೆ. ಈ ಅಮಾನುಷೀ ಯುದ್ಧದ ಪರಿಣಾಮವು ಹೇಗಾಗಬಹುದು? ನಿಷ್ಕರುಣೆಯಿಂದ ಬಡನಾಗರಿಕರ ಮೇಲೆ ಗುಂಡೆಸೆದು ಸುಟ್ಟು ಭಸ್ಮಮಾಡುವ ಯತ್ನವು ಹೇಗೆ ನಡೆಯುತ್ತಿದೆ? ವಿದೇಶ ಸರಕಾರಗಳು ಯಾವ ರೀತಿಯ ಧೋರಣೆಯನ್ನು ಅನುಸರಿಸಿಕೊಂಡಿವೆ? ಯುದ್ಧಪೀಡಿತ ಚೀನದಲ್ಲಿ ನಿರ್ಗತಿಕ ಸ್ತ್ರೀಯರ ಪರಿಸ್ಥಿತಿ ಹೇಗಿದೆ? ಎಂಬಿವೇ ಮೊದಲಾದ ವಿಚಾರಗಳನ್ನು ಸಹಾನುಭೂತಿಪರ ದೃಷ್ಟಿಯಿಂದ ನೀವು ವಿಚಾರಿಸಿದರೆ ಕರುಣೆಯಿಂದ ಕೆಲವು ಹನಿಗಳಾದರೂ, ನಿಮ್ಮ ಕಣ್ಣಿನಿಂದ ಸುರಿಯಬಹುದು. ಸಾಮ್ರಾಜ್ಯದಾಹದಿಂದ ವಿಶ್ವವನ್ನೇ ಮರೆತಿರುವ ದಯಾಹೀನ ಸೈನಿಕ ಸರಕಾರಗಳ ಅತ್ಯಾಚಾರದ ವಿವರವನ್ನು ಕೇಳಿ ನಿಮ್ಮ ರಕ್ತವು ಉಕ್ಕೇರಿ ಹರಿಯಬಹುದು. ವಿಕ್ಟರ್ ಗೊಲಾಂಝುರು ಇಂಗ್ಲೆಂಡಿನಲ್ಲಿ ಮೊನ್ನೆ ಮೊನ್ನೆ ಪ್ರಕಟಿಸಿದ "*What War-means*" ಎಂಬ ಪುಸ್ತಕವನ್ನೋದಿ ಈ ಲೇಖನವನ್ನು ಬರೆಯಲಾಗಿದೆ.

○ ○ ○

ಚೀನೀಯರು ತಮ್ಮ ರಕ್ಷಣೆಗಾಗಿ ಹೋರಾಡುತ್ತಿರುವರೆಂದು ೧೯೩೧ರಿಂದ ಅವರು ಜಪಾನಿನೊಡನೆ ಸಂಧಾನಕ್ಕಾಗಿ ಮಾಡಿದ ಯತ್ನಗಳೇ ಸಾಕ್ಷಿಯಾಗಿವೆ. ಸಾಮ್ರಾಜ್ಯಶಾಹಿಯ ತೃಷೆಯು ಸಾಮಾನ್ಯವಾದುದಲ್ಲ. ಚೀನವನ್ನು ನುಂಗಿ ತನ್ನ ದಾಹವನ್ನು ತಣಿಸಬೇಕೆಂಬ ಅದರ ಇಚ್ಛೆಯು ಕಾರ್ಯರೂಪಕ್ಕೆ

---

**ಚೀನಾ-ಜಪಾನಿನ**




ಚೀನವನ್ನು ರಷ್ಯವು ಆಕ್ರಮಿಸ
ಕಿವಿ ಹಿಡಿದು

# ಜಪಾನ್ ಸೈನಿಕರ ಅತ್ಯಾಚಾರ

## ಯರ ಮಾನಾಪಮಾನ

## ಚಕ್ರವರ್ತಿ''ಯ

### ಪ್ರಬಲ ಅನ್ಯಾಯ.

### ದೊರಕಬಲ್ಲುದೆ?

ತರಲ್ಪಟ್ಟಿತು. ಜಪಾನಿನ ದೇವಾಂಶ ಸಂಭೂತ ಚಕ್ರವರ್ತಿ ಹಿರೋ ಹಿಟೋವಿನ ಸೈನಿಕರು ಚೀನದ ಭೂಮಿಯನ್ನು ಪ್ರವೇಶಿಸಿದರು. ಜಪಾನಿನ ಬಡಜನತೆಯು ಬೆವರು ಸುರಿಸಿ ದುಡಿದ ಹಣದಿಂದ ಕೊಬ್ಬಿಸಲ್ಪಟ್ಟ ಸೈನಿಕರು ಚೀನದ ಬಡ

ಕಿವಿ ಹಿಂಡುವ ಆಟ.



ಬಹುದೆಂದು ಜಪಾನು ಚೀನದ ಎಚ್ಚರಿಸುತ್ತಿದೆ.

ನಾಗರಿಕರನ್ನು ಧ್ವಂಸಗೊಳಿಸಲು ಹಿಂಜರಿಯಲಿಲ್ಲ. ಬಡಜನಾಂಗಗಳ ಹಿತಸಂಬಂಧಗಳನ್ನು ರಕ್ಷಿಸಲಿಕ್ಕೆಂದು ಸ್ಥಾಪಿಸಲ್ಪಟ್ಟ ಜನಾಂಗ ಸಭೆಯು ನಿರ್ವೀರ್ಯ ನಿಸ್ತೇಜವಾಗಿ ಜಿನೇವದಲ್ಲಿ ಕೊಳೆಯಲಾರಂಭಿಸಿತು; ಬ್ರೂಸೆಲ್ಸ್ ಪರಿಷತ್ತು ಠಕ್ಕರ ಕೂಟವಾಗಿ ಪರಿಣಮಿಸಿತು. ಸ್ವಾತಂತ್ರ್ಯ ಪ್ರಿಯರಾದ ಚೀನೀಯರು ತಮ್ಮ ಜೀವದಾಶೆಯನ್ನು ತೊರೆದು ಹೋರಾಡಬೇಕಾಯಿತು. ಸಾಮ್ರಾಜ್ಯಶಾಹಿಯ ಕರಾಳ ಕತ್ತಿಯನ್ನೆದುರಿಸಲು ತನ್ನೆದೆಯನ್ನೊಡ್ಡಬೇಕಾಯಿತು. ಸ್ತ್ರೀಯರು ತಮ್ಮ ಸರಳಜೀವನದ ಮೃದು ಮಧುರ ರೀತಿ ನೀತಿಗಳಿಗೆ ತಿಲಾಂಜಲಿಯನ್ನಿತ್ತು, ಸಂಸ್ಕೃತಿಯ ಎದೆ ಮೆಟ್ಟಿ ಪ್ರಲಯ ತಾಂಡವವಾಡುವ ಜಪಾನ್ ಸೈನಿಕರ ಧಾಳಿಯನ್ನು ತಡೆಯಬೇಕಾಯಿತು.

೦ ೦ ೦

ನಾನ್ಕಿಂಗ್ ನಗರ! ಬಡನಾಗರಿಕರಿಗೆ, ವಿದೇಶಗಳ ಜನರಿಗೆ ರಕ್ಷಣೆಯನ್ನೀಯುವುದಕ್ಕಾಗಿ ಒಂದು ರಕ್ಷಣಾಕ್ಷೇತ್ರವು ಪ್ರಾರಂಭಿಸಲ್ಪಟ್ಟಿತು. ಸಹಸ್ರಾರು ನಿರ್ಗತಿಕ ಸ್ತ್ರೀಪುರುಷರು ಈ ಕ್ಷೇತ್ರದಲ್ಲಿ ಸಂರಕ್ಷಣೆಯನ್ನು ಪಡೆದರು. ಜಪಾನ್ ವಿಮಾನಗಳು ಏಕಪ್ರ



ಮಾರ್ಷಲ್ ಚಿಯಾಂಗ್ ಕೈಶೇಕರ ಬಲಗೈಯಂತಿದ್ದು ಚೀನಕ್ಕಾಗಿ ಹೋರಾಡುತ್ತಿರುವ ವೀರ ರಮಣಿ **ಸತೀ ಚಿಯಾಂಗ್ ಕೈಶೇಕ್.**

ಕಾರವಾಗಿ ಸಾವಿನ ಮಳೆಗರೆದುವು. ಯುದ್ಧಸಾಧನಗಳ ಸ್ಫೋಟನವು ಚೀನದ ದಿಗ್ದೆಸೆಗಳಿಗೆ ಕೇಳಿಸಿತು. ಅಸಾಧಾರಣ ಗೊಂದಲವು ಎಲ್ಲೆಡೆಗಳಲ್ಲಿಯೂ ಹಬ್ಬಿಕೊಂಡಿತು.

೦ ೦ ೦

೧೯೩೭. ದಶಂಬರ ೨೪! ಚೀನದ ಚರಿತ್ರೆಯಲ್ಲಿ ಇಷ್ಟೊಂದು ಕರುಣಾಜನಕ ದಿನವು ಬೇರೊಂದಿರಲಾರದು. ನಾಗರಿಕರು ತಮ್ಮ ಹೆಸರನ್ನು ಜಪಾನ್ ಅಧಿಕಾರಿಗಳ ಪುಸ್ತಕಗಳಲ್ಲಿ ಬರೆಸಬೇಕೆಂದಾಯಿತು. ನೀತಿಯ ಮೇರೆಮೀರಿ ನಡೆಯುವುದರಲ್ಲಿ ಅಗ್ರಗಣ್ಯರಾದ ಜಪಾನ್ ಸೈನಿಕರು ದಾರಿಯಲ್ಲಿ

ಸಿಕ್ಕಿದ ಸ್ತ್ರೀಪುರುಷರನ್ನು ಮಕ್ಕಳು ಮರಿಗಳನ್ನು ಗುಂಡೆಸೆದು ಭಸ್ಮ ಮಾಡಿದರು. ನೂರಾರು ಮನೆಗಳಿಗೆ ಬೆಂಕಿಹಚ್ಚಲ್ಪಟ್ಟಿತು. ಮರುದಿನ ಕೆಂಪು ಸ್ವಸ್ತಿಕಾ ಲೀಗಿನವರು ೩೦,೦೦೦ ಶವಗಳನ್ನು ಹುಗಿಯುವಂತಾಯಿತು. ನರಕವೆಂಬುದು ಇರುವುದಾದರೆ ಅದು ಅಂದಿನ ನಾನ್ಕಿಂಗ್ ನಗರಕ್ಕಿಂತ ಭೀಕರವಾಗಿರಲಿಕ್ಕಿಲ್ಲ. ಮೃತದೇಹಗಳ ಪರ್ವತಗಳು, ನಿರ್ಭಾಗ್ಯ ಸ್ತ್ರೀಯರ ರಾಶಿರಾಶಿಗಳು, ಎಳೆ ಗೂಸುಗಳು—.... ಆ ಭಯಾನಕ ದೃಶ್ಯದ ವಿವರವನ್ನು ಕೇಳುವಾಗಲೇ ಮೈ ಜುಮ್ಮೆನ್ನುತ್ತದೆ.

೦ ೦ ೦

ಗುಂಡಿಗೆ ಎದೆಯೊಡ್ಡಿ ಸಾಯಬಹುದು. ಕರಾಳಕತ್ತಿಗೆ ಕೊರಳನ್ನೊಡ್ಡಬಹುದು, ಉರಿಯುವ ಬೆಂಕಿಯ ರಾಶಿಗೆ ಹಾರಿ ಸುಟ್ಟು ಬೂದಿಯಾಗಬಹುದು. ಆದರೆ ತಮ್ಮೊಲವಿನ ಮಡದಿ ಮಕ್ಕಳ ಮೇಲೆ ತಡೆಯಲಾರದ ಅತ್ಯಾಚಾರವನ್ನು ನಡೆಸುವಾಗ ಎಂಥವರೂ ಸಹಿಸಲಿಕ್ಕಿಲ್ಲ. ಕುಡಿದು ಮತ್ತರಾದ ಜಪಾನ್ ಸೈನಿಕರು ಚೀನೀಯ ರಮಣಿಯರ ಅಪಮಾನ ಮಾಡುವಾಗ ಅವರು ಮುನ್ನಡೆದು ಗುಂಡಿನೇಟಿಗೆ ತುತ್ತಾಗಿ ಮಡಿದಿದ್ದಾರೆ. ಸ್ತ್ರೀಯರ ಮೇಲೆ ಜಪಾನ್ ಸೈನಿಕರು ಮಾಡಿದ ಅತ್ಯಾಚಾರದ ಕುರಿತು '*What War means*' ಎಂಬುದರಲ್ಲಿ ಚೆನ್ನಾಗಿ ವಿವರಿಸಲಾಗಿದೆ. ೧೯೩೭ನೆ ದಶಂಬರ ೧೩ರಿಂದ ೧೯ರ ವರೆಗೆ ನಾನ್ಕಿಂಗ್ ಮೊದಲಾದ ಸ್ಥಳಗಳಲ್ಲಿ ಅವರ್ಣನೀಯ ಅನ್ಯಾಯಗಳು ನಡೆದಿದೆ. ಜಪಾನ್ ಸೈನಿಕರು ಪ್ರಾಣಿಗಳಂತೆ ತಮ್ಮ ಕಾಮದ ಕೊಡವನ್ನು ನಿರ್ಲಜ್ಜೆಯಿಂದ ಇರುಳುಹಗಲೆನ್ನದೆ ತುಂಬಿಸಿಕೊಂಡಿದ್ದಾರೆ. ಡಾ। ಲೂಯಿಸ್ ಸ್ಮಿತ್ ಎಂಬವರು ಬರೆದೊಂದು ಲೇಖನದಲ್ಲಿ ಹೀಗನ್ನುತ್ತಾರೆ: –

"ನಾನು ಸಂರಕ್ಷಣಾ ಕೇಂದ್ರದಿಂದ ಸ್ವಲ್ಪದೂರದಲ್ಲಿದ್ದೆ. ಜೀವವುಳಿಸಿಕೊಳ್ಳುವುದಕ್ಕಾಗಿ ಕೆಲವು ಚೀನೀ ತರುಣಿಯರು ದಿಙ್ಮೂಢರಾಗಿ ಓಡುತ್ತಿದ್ದರು. ಜಪಾನ್ ಸೈನಿಕರ ಗೃಧ್ರದೃಷ್ಟಿಯಿಂದ ಅವರಿಗೆ ತಪ್ಪಿಸಿಕೊಳ್ಳಲಾಗಲಿಲ್ಲ. ಏಳೆಂಟು ಮಂದಿ ಸೈನಿಕರು ಅವರೆಡೆಗೆ ಓಡಿ ಬಲಾತ್ಕಾರದಿಂದ ಅಡ್ಡಗಟ್ಟಿದರು. ಗುಂಡಿನ ಭಯವು ಅವರನ್ನು ಚಲಿಸದಂತೆ ಮಾಡಿತು. ಕ್ರೂರಹೃದಯಿಗಳಾದ ಸೈನಿಕರು ಅವರ ಮೈಮೇಲಿದ್ದ ಬಟ್ಟೆಗಳನ್ನು ಚೂರೂ ಉಳಿಯದಂತೆ ಹರಿದು ಬಿಸಾಡಿದರು. ರಸ್ತೆಯಲ್ಲಿ, ತಿರ್ಯಗ್ಜಂತುಗಳಂತೆ ಆ ತರುಣಿಯರಿಗೆ ಹಠಸಂಭೋಗ ಮಾಡಿದರು. ಆ ನಿರ್ಭಾಗ್ಯ ತರುಣಿಯರ ಮೊರೆಯು ಎಂಥವನ ಎದೆಯನ್ನೂ ಒಡೆಯದಿರದು. ಒಬ್ಬರಬಳಿಕೊಬ್ಬರಂತೆ ಅವರ ಪಾಪಕೃತ್ಯವು ಎಡೆಬಿಡದೆ ನಡೆಯಿತು. ಅವರಲ್ಲಿ ಕೆಲವರು ತಮ್ಮ ಮಾನವನ್ನು ಹರಕುಚಿಂದಿಗಳಿಂದ ರಕ್ಷಿಸಿಕೊಂಡು ಎಲ್ಲಿಗೋ ಓಡಿದರು. ಮಿಕ್ಕುಳಿದ ಇಬ್ಬರು ಕುವರಿಯರು ವೇದನೆಯಿಂದ ಅಲ್ಲೇ ತಮ್ಮ ಅವಸಾನವನ್ನು ಹೊಂದಿರಬೇಕು."

**"ದೇವಾಂಶ ಸಂಭೂತ"**



ಜಪಾನಿನ ಚಕ್ರವರ್ತಿ
**ಹಿರೋಹಿಟೊ.**

೦ ೦ ೦

"ದಶಂಬರ ೧೯ರಂದು ೨೦,೦೦೦ಕ್ಕಿಂತಲೂ ಮಿಕ್ಕಿದ ಸ್ತ್ರೀಯರು ನಾನ್ಕಿಂಗ್ ಮತ್ತು ಸಿನ್ಲಿಂಗ್ ಕಾಲೇಜಿನಲ್ಲಿ ರಕ್ಷಣೆಯನ್ನು ಪಡೆದರು. ಆ ದಿನ ರಾತ್ರಿ ವಿದೇಶಗಳ ಹಲವು ಸನ್ಮಾನ್ಯ ಜನರ ಬೇಡಿಕೆಯನ್ನು ಲೆಕ್ಕಿಸದೆ ಜಪಾನ್ ಸೈನಿಕರು ವಿಶ್ವವಿದ್ಯಾಲಯವನ್ನು ನುಗ್ಗಿ ಸ್ತ್ರೀಯರ ಮೇಲೆ ಬಲಾತ್ಕರ ನಡೆಸಿದರು. ಅಲ್ಲಿಯ ಅಂದಿನ ಗೊಂದಲವನ್ನು ಹೇಳಿತೀರದು. ನೂರಾರು ಸೈನಿಕರು ತಮ್ಮ ಗುಂಡುಗಳಿಂದ ಸಂಭೋಗಕ್ಕೊಪ್ಪದ ನೀರೆಯರನ್ನು ಹೊಡೆದು ಕೊಂದರು. ಮಿಕ್ಕುಳಿದವರು ಭಯದಿಂದ ತಮ್ಮ ದೇಹವನ್ನು ಅವರಿಗೆ ದಾನಮಾಡಿದರು. ದಶಂಬರ ೧೯ರಂದು ವಿದ್ಯುಚ್ಛಕ್ತಿಯ ಸಾಲುಗಳು ಕಡಿಯಲ್ಪಟ್ಟಿರ

ಲಿಲ್ಲ. ಕಾಮು ಪ್ರೇರಿತರಾದ ಸೈನಿಕರು ವಿಶ್ವವಿದ್ಯಾಲಯದ ಕಟ್ಟಡದೊಳಗೆ ಬೆಳಕಿನಲ್ಲಿ ಕುಲೀನ ಚೀನೀ ಸ್ತ್ರೀಯರನ್ನು ತಮ್ಮೆದುರು ಬತ್ತಲೆಯಾಗಿ ನಿಲ್ಲುವಂತೆ ಮಾಡಿದರು. ಇದಕ್ಕೊಪ್ಪದ ನೂರಾರು ಮಂದಿ ಗುಂಡಿನೇಟಿಗೆ ತುತ್ತಾದರು. ಪ್ರತಿಯೊಬ್ಬ ಸ್ತ್ರೀಯೂ ತನ್ನ ವಸನಗಳನ್ನು ಬಿಚ್ಚಿ ಸೈನಿಕರ ಸಮೀಪಕ್ಕೆ ಬಂದು, ಬಟ್ಟೆಯರಾಶಿಗೆವಸನಗಳನ್ನು ಹಾಕಬೇಕಾಯಿತು. ಮತ್ತರಾದ ಸೈನಿಕರು ತಮ್ಮ ದೃಷ್ಟಿಗೆ ಸುಂದರಿಯರೆಂದು ಕಂಡವರನ್ನು ಅಷ್ಟು ಸಾವಿರ ಮಂದಿಯೆದುರು ಆಲಿಂಗಿಸಿ, ಚುಂಬಿಸಿ ಹಠ ಸಂಭೋಗ ಮಾಡಿದರು. ಇಷ್ಟೂ ಸಾಲದೆ ಅವರ ಬಟ್ಟೆಬರೆಗಳ ರಾಶಿಗೆ ಬೆಂಕಿ ಕೊಡಲ್ಪಟ್ಟಿತು. ಸಾವಿರಾರು ಸ್ತ್ರೀಯರು ಬತ್ತಲೆಯಾಗಿ ಬೀದಿಗಳಲ್ಲಿ ಓಡುತ್ತಿರುವುದನ್ನು ಅನೇಕ ವಿದೇಶಿಯರು ಕಂಡಿದ್ದಾರೆ.

೦ ೦ ೦

ಮರುದಿನ ಈ ವಿಚಾರವು ಜಪಾನ್ ಅಧಿಕಾರಿಗಳಿಗೆ ತಿಳಿಸಲ್ಪಟ್ಟಿತು. ಅಂದಿನಿಂದ ಸೈನಿಕರು ರಕ್ಷಣಾಕ್ಷೇತ್ರವನ್ನು ಪ್ರವೇಶಿಸಬಾರದೆಂಬ ನಿಯಮವು ಜಾರಿಗೆ ತರಲ್ಪಟ್ಟಿತು. ಈ ನಿಯಮವನ್ನು ಪೂರ್ಣವಾಗಿ ಮನ್ನಿಸದಿದ್ದರೂ, ಇದರಿಂದ ತುಂಬಾ ಪ್ರಯೋಜನವಾಯಿತು. ಒಟ್ಟಿನ ಮೇಲನ್ನುವದಿದ್ದ ಮಾರ್ಚ್ ತಿಂಗಳೊಳಗೆ ೫೦೦೦ ಸ್ತ್ರೀಯರು ಹಠ ಸಂಭೋಗ ಮಾಡಲ್ಪಟ್ಟಿರುವರೆಂದೂ, ೧೧.೦೦೦ ಸ್ತ್ರೀಯರು ಅಂತಹ ವಿವಿಧ ಅತ್ಯಾಚಾರಗಳಿಗೊಳಗಾಗಿರುವರೆಂದೂ ಡಾ| ಸ್ಮಿತ್ ರವರು ಬರೆಯುತ್ತಾರೆ.

ಚೀನದ ನಾಯಕರಾದ ಜನರಲ್ ಚಿಯಂಗ್ ಕೈ ಶೇಕರು ಕೊನೆಯ ತನಕವೂ ಹೋರಾಡಿ ತಮ್ಮ ಸ್ವಾತಂತ್ರ್ಯವನ್ನುಳಿಸಿಕೊಳ್ಳುವ ದೃಢ ಪ್ರತಿಜ್ಞೆಯನ್ನುಮಾಡಿದ್ದಾರೆ. ಅವರ ವೀರಪತ್ನಿಯಾದ ಸತೀ ಚಿಯಾಂಗ್ ಕೈ ಶೇಕರು ಎಲ್ಲಾ ವಿಧದಲ್ಲಿಯೂ ತಮ್ಮ ರಾಷ್ಟ್ರದ ಸೇವೆಯನ್ನು ಮಾಡುತ್ತಿದ್ದಾರೆ. ಸೈನಿಕರು, ಸ್ತ್ರೀಯರು ಪುರುಷರೆನ್ನದೆ ಪ್ರತಿಯೊಬ್ಬರೂ



**ಜಪಾನಿನ ಸೈನ್ಯಾಧಿಪತಿ.**

ತಮ್ಮ ಕೈಲಾದ ಮಟ್ಟಿನ ಸೇವೆಯನ್ನು ಚೀನಕ್ಕೆ ಸಲ್ಲಿಸುತ್ತಿದ್ದಾರೆ. ಗೋರಿಲ್ಲಾ ಯುದ್ಧ ವಿಧಾನಗಳಿಂದ ಜಪಾನಿಯರನ್ನು ಎದುರಿಸಿ ಕೊನೆಗೆ ಅವರನ್ನು ದಂಗುಬಡೆಯುವ ಯೋಚನೆಯು ಚೀನಿಯರಲ್ಲಿ ಬಲವಾಗಿದೆ. ಒಂದು ವರುಷದ ಭೀಕರ ಯುದ್ಧವಾದ ಬಳಿಕ ಚೀನದ ಪರಿಸ್ಥಿತಿಯು ಹೇಗಿದೆ? ಚೀನೀಯರು ನಿಜವಾಗಿಯೂ ಯುದ್ಧದಲ್ಲಿ ಜಯಶೀಲರಾಗುವರೆ? ಎಂಬ ಪ್ರಶ್ನೆಗೆ ಕೆಳಗಿನಂತೆ ಉತ್ತರವೀಯ ಬಹುದು.

೦ ೦ ೦

ಈಗಾಗಲೇ ಚೀನದ ಮೂರರಲ್ಲೊಂದು ಅಂಶವು ಜಪಾನಿಯರ ಕೈವಶವಾಗಿದೆ. ಅದರ ಮುಕ್ಕಾಲಂಶದಷ್ಟು ಆಧುನಿಕ ಕೈಗಾರಿಕೆಗಳು ನಾಶವಾಗಿವೆ. ಬಹಳ ಫಲವತ್ತಾದ ಯಾಂಗ್ಸೆ ಮತ್ತು ಯೆಲ್ಲೋ ನದಿಗಳ ಎರಡು ಬಯಲು ಭೂಮಿಗಳು ಚೀನೀಯರಿಂದ ಕಸಕೊಳ್ಳಲ್ಪಟ್ಟವೆ. ಹೂನಾನ್ ಪ್ರಾಂತ್ಯವು ಇನ್ನೂ ಚೀನೀಯರ ಅಧೀನವಿದೆ. ಕ್ಯಾಂಟನ್ ಒಂದಲ್ಲದೆ ಮಿಕ್ಕುಳಿದ ಎಲ್ಲಾ ಬಂದರುಗಳು ಜಪಾನಿಯರ ಅಧೀನವವೆ. ಇವು ಚೀನದ ನಷ್ಟಗಳು.

೦ ೦ ೦

ಯುದ್ಧದಲ್ಲಿ ಚೀನಕ್ಕೆ ಇಷ್ಟರ ತನಕ ಕೆಲವು ಲಾಭಗಳಾಗಿವೆ. ಚೀನೀಯರಲ್ಲಿ ಒಂದುನವ ಹುರುಪು ಮತ್ತು ನವನಿರ್ಧಾರವು ತಲೆದೋರಿದೆ. ಡಾ| ಲೂಯಿಸ್ ಸ್ಮಿತ್‌ರವರಿಗೆ ಕಳೆದ ಅಗೋಸ್ತು ತಿಂಗಳಲ್ಲಿ ಚಂಗ್‌ಕಿಂಗಿನ ಒಬ್ಬ ಚೀನೀ ಅಧಿಕಾರಿಯು ಬರೆದ ಪತ್ರದ ಸಾರಾಂಶವು ಚೀನಕ್ಕೆ ಸಿಕ್ಕಿದ ಲಾಭವನ್ನು ವಿವರಿಸುತ್ತದೆ: "ನಾವು ಹ್ಯಾಂಕೋ ನಗರದಲ್ಲಿ ಜಪಾನಿಯರಿಗೆ ಮಹತ್ವದ ಸೋಲನ್ನುಂಟುಮಾಡುವ ದೃಢ ನಿರ್ಧಾರವನ್ನು ಮಾಡಿದ್ದೇವೆ. ಎಡೆಬಿಡದೆ ಜಪಾನಿಯರ ಧಾಳಿಯನ್ನು ಎದುರಿಸಿ, ಶುಷ್ಕವಾದ ಸಂಧಾನ ಯತ್ನಗಳಿಗೆ ತಲೆತಗ್ಗಿಸದಿರುವುದರ ಮೇಲೆ ನಮ್ಮ ಕಲ್ಯಾಣವು ಹೊಂದಿಕೊಂಡಿದೆ." ಇಷ್ಟಲ್ಲದೆ ಪಶ್ಚಿಮ ಚೀನದ ಆರ್ಥಿಕಪರಿಸ್ಥಿತಿಯನ್ನು

ಸುಧಾರಿಸುವುದಕ್ಕಾಗಿ ಮಹತ್ವದ ಯತ್ನಗಳು ನಡೆಯುತ್ತವೆ. ೩೦,೦೦೦ ಔದ್ಯೋಗಿಕಸಂಸ್ಥೆಯನ್ನು ತೆರೆಯುವ ಯೋಜನೆಯು ಈಗಾಗಲೆ ಚೀನೀಯ ಸರಕಾರದಿಂದ ಮಾಡಲ್ಪಟ್ಟಿದೆ. ಆರ್ಥಿಕಬಲವಿಲ್ಲದಿದ್ದರೆ ಜಪಾನಿನೊಡನೆ ಹೋರಾಡುವುದು ಪ್ರಯಾಸವಾದುದರಿಂದ ಚೀನವು ಈ ಕಡೆಗೆ ಹೆಚ್ಚಿನ ಲಕ್ಷ್ಯವೀಯುತ್ತದೆ. ಹೊಸ ಸೈನ್ಯದ ರಚನೆಯು ಈಗಾಗಲೆ ಪೂರ್ಣವಾಗಿದೆ. ಚೀನೀಯರ ಉಪಾಯದಿಂದಾಗಿ ಜಪಾನಿಯರು ಶಾಂಗ್ಹಾಯಿಯಿಂದ ಹ್ಯಾಂಗ್ಚೋ ವರೆಗೆ ಅಂದರೆ ಸುಮಾರು ೫೦೦ ಮೈಲುಗಳಷ್ಟು ವಿಸ್ತೀರ್ಣದ ಭೂಮಿಯನ್ನುಳಿಸಿಕೊಳ್ಳಬೇಕಾಗಿದೆ. ಚೀನೀಯರ ಕೃತಕ ಯುದ್ಧವಿಧಾನದಿಂದಾಗಿ ಇದು ಬಹಳ ಪ್ರಯಾಸವಾಗಿ ಪರಿಣಮಿಸಿದೆ

೦ ೦ ೦

"ಚೀನಾ ಜಪಾನು ಯುದ್ಧದಲ್ಲಿ ಚೀನದ ಪಾಡೇನು?" ಎಂಬುದು ಪ್ರತಿಯೊಬ್ಬರೂ ಕೇಳುವ ಪ್ರಶ್ನೆಯಾಗಿದೆ. ಇವಕ್ಕೆ ಸರಿಯಾದ ಉತ್ತರವನ್ನು ಕೊಡುವುದು ಸುಲಭಸಾಧ್ಯವಲ್ಲ. ಆದರೆ ಚೀನೀಯರು ಹ್ಯಾಂಕೋ ನಗರದಂತಹ ಕೆಲವು ಪ್ರಾಮುಖ್ಯಸ್ಥಳಗಳನ್ನು ರಕ್ಷಿಸಿಕೊಂಡರೆ, ಜಪಾನಿನ ಮುನ್ನಡೆಯನ್ನು ತಡೆದರೆ, ಚೀನದ ಔದ್ಯೋಗಿಕಪರಿಸ್ಥಿತಿಯನ್ನು ಸುಧಾರಿಸಿ, ಹಣಕಾಸುಗಳ ವ್ಯವಸ್ಥೆಯನ್ನು ಸರಿಪಡಿಸಿದರೆ, ವಿದೇಶಸರಕಾರಗಳು ಖಂಡಿತವಾಗಿಯೂ ಚೀನಕ್ಕೆ ಸಾಲ ಕೊಡುವುದರಲ್ಲಿ ಸಂಶಯವಿಲ್ಲ. ಚೀನವು ಈಗಾಗಲೆ ಔದ್ಯೋಗಿಕ ಸಂಸ್ಥೆಗಳ ಸ್ಥಾಪನಾಕೆಲಸವನ್ನು ದಕ್ಷತೆಯಿಂದ ಪ್ರಾರಂಭಿಸಿರುವುದು ಶುಭಚಿಹ್ನೆಯಾಗಿದೆ ವಿದೇಶೀ ಸಾಲವು ಸಿಗದಿದ್ದರೆ ಇತ್ತಂಡದವರಿಗೂ ಬಹಳ ಪ್ರಯಾಸವಾಗಬಹುದು. ಚೀನವು ಮೊನ್ನೆ ಮೊನ್ನೆ ಇಂಗ್ಲೆಂಡಿನಿಂದ ತುಂಬಾ ಸಾಲವನ್ನು ಪಡೆದಿರುವುದಲ್ಲದೆ ಸದ್ಯದಲ್ಲಿಯೆ ಅಮೇರಿಕದಿಂದಲೂ ಪಡೆಯುವುದರಲ್ಲಿದೆ.

೦ ೦ ೦

ಚೀನಕ್ಕೆ ವಿಜಯವು ಲಭಿಸಬೇಕಾದರೆ ಕೆಳಗಿನ ವಿಚಾರಗಳಲ್ಲಿ ಅದಕ್ಕೆ ಜಯವಾಗಬೇಕು. ಮೊದಲನೆಯದಾಗಿ ಚೀನೀಯರಲ್ಲಿ ಐಕ್ಯವನ್ನು ಕೊನೆಯ ತನಕವೂ ಉಳಿಸಿಕೊಳ್ಳುವುದು, ಎರಡನೆಯದಾಗಿ ಸಾಧನಗಳ ರಫ್ತು ಮತ್ತು ವಿದೇಶೀ ಸಾಲಗಳಿಂದ ಹಣಸಂಪಾದನೆ. ಚೀನವು ಸೋತರೆ ಶತಮಾನ ಶತಮಾನಗಳ ವರೆಗೆ ಆರ್ಥಿಕ ಮತ್ತು ಬೌದ್ಧಿಕ ದಾಸ್ಯಕೂಪದಲ್ಲಿ ಬಿದ್ದು ನರಳಬೇಕಾಗುವುದೆಂಬುದರಲ್ಲಿ ಎರಡಭಿಪ್ರಾಯಗಳಿಲ್ಲ. ಚೀನಕ್ಕೆ ಇತರರು ಮಾಡಬಹುದಾದ ಪ್ರಾಮುಖ್ಯ ಸಹಾಯವೆಂದರೆ ಅದು ಹಣದ ರೂಪದಲ್ಲಿ. ಜಪಾನಿನ ಹಾನಿಕಾರಕ ವಿಧಾನಗಳಿಗೆ ಜಯವಾಗುವುದಕ್ಕಿಂತ ಚೀನಕ್ಕೆ ಯಶಸ್ಸು ದೊರಕಿದರೆ ಜಗತ್ತಿಗೆ ತುಂಬಾ ಪ್ರಯೋಜನವಿದೆಯೆಂಬುದನ್ನು ಪ್ರತಿಯೊಬ್ಬರೂ ತಿಳಿಯಬೇಕಾಗಿದೆ

---

ವಿನೋದದಲ್ಲಿ—

# ೧೯೪೮ರಲ್ಲಿ ಪತ್ರಿಕೋದ್ಯಮದ-ಪರಿಸ್ಥಿತಿ



'ಸಂಪಾದಕರು ಭಾರ ಹೆಚ್ಚಿಸಿಕೊಳ್ಳುವುದಕ್ಕಾಗಿ ಬಕಾಸುರನನ್ನು ಅನುಸರಿಸುವರು?

- ಸರ್ವಾಧಿಕಾರಿಗಳು ಬದುಕಿ ಉಳಿದರೆ ಸಮಗ್ರ ಜಗತ್ತಿನಲ್ಲಿ ಒಂದೇ ಒಂದು ಪತ್ರಿಕೆ!
- ಪ್ರಜಾಸತ್ತೆಯುಳಿದರೆ ತಲೆಗೊಂದು ಪತ್ರಿಕೆ.
- ಮನೆವಾರ್ತೆಯೊಡನೆ ಮೊಳೆ ಜೋಡಣೆಯ ಮಿಲನ.
- ರಾಜಕೀಯ ಧುರೀಣರ ಹೇಳಿಕೆಗಳಿಗೆ ಜಾಹಿರಾತಿನಂತೆಯೇ ಸನ್ಮಾನ.



ಇದು "ಭವಿಷ್ಯ"ದ ಯುಗ. ಪ್ರತಿಯೊಬ್ಬರೂ ಭವಿಷ್ಯವನ್ನು ತಿಳಿಯಲು ಯತ್ನಿಸುತ್ತಿರುವಾಗ ೧೯೩೮ ಹತ್ತು ವರುಷಗಳ ಬಳಿಕ ಪತ್ರಿಕೋದ್ಯಮದ ಭವಿಷ್ಯವು ಹೇಗಾಗಬಹುದೆಂದು ಹೇಳುವುದು ಅಪ್ರಸ್ತುತವೆ? "ಅಲ್ಲ"ವೆಂದು ನೀವು ಹೇಳುವಿರೆಂಬುದನ್ನು ಭವಿಷ್ಯ ಬಲದಿಂದ ತಿಳಿದೇ ಈ ಲೇಖನವನ್ನು ಬರೆಯುತ್ತಿದ್ದೇನೆ!

....

**ಸರ್ವಾಧಿಕಾರಿಗಳು ಬದುಕಿದರೆ—**

ಜಗತ್ತಿನಲ್ಲಿ ಸರ್ವಾಧಿಕಾರಿಗಳು ೧೯೪೮ರ ತನಕ ಬದುಕಿಕೊಂಡರೆ ಒಂದೇ ಒಂದು ಪತ್ರಿಕೆಯು ಮಾತ್ರ ಬದುಕುವ ಸಂಭವವು ಕಾಣುತ್ತಿದೆ. ಪ್ರಜಾಸತ್ತೆಯು, ಸರ್ವಾಧಿಕಾರಿಗಳನ್ನು ಮೂಲೆಪಾಲು ಮಾಡುವಂತಾದರೆ, ಪ್ರಜಾಸತ್ತೆಯನ್ನು ಗೌರವಿಸುವ ಹುಚ್ಚು ಬುದ್ಧಿಯು ಜನತೆಯಲ್ಲಿ ಉಂಟಾದರೆ, ೧೯೪೮ರಲ್ಲಿ ಓದುಬರಹವರಿಯುವ ಪ್ರತಿಯೊಬ್ಬನೂ ಒಂದೊಂದು ಪತ್ರಿಕೆಯನ್ನು ಹೊರಡಿಸಬಹುದು. ಆ ಕಾಲದವರೆಗೆ ಜರ್ಮನಿ, ಇಟಲಿ ಮತ್ತು ರಷ್ಯಗಳಲ್ಲಿರುವಂತಹ ಸರ್ವಾಧಿಕಾರಿತ್ವವು ಬದುಕಿ ಬಾಳುವುದು ಸಂಶಯಾಸ್ಪದವಾಗಿದೆ. ೧೯೪೮ರ ವರೆಗೆ ಪ್ರತಿಯೊಬ್ಬನೂ ಆಸ್ತಿಪಾಸ್ತಿಗಳನ್ನು ಅನುಭೋಗಿಸಲೆಡೆಯಿದ್ದರೆ ಸಾಧ್ಯವಿರುವವರು ತಮ್ಮ ಅಭಿಪ್ರಾಯಗಳನ್ನು ಇತರರಿಗೆ ತಿಳಿಸುವುದಕ್ಕಾಗಿ ಒಂದೊಂದು ಪತ್ರಿಕೆಗಳನ್ನು ಹೊರಡಿಸಬಹುದು.

....

**ತಲೆಗೊಂದು ಪತ್ರಿಕೆ!**

೧೯೪೮ರ ಪ್ರಾರಂಭದಲ್ಲಿ ಪ್ರತಿಯೊಂದು ಮನೆಯಿಂದ ಒಂದೊಂದ ಪತ್ರಿಕೆಯು ಪ್ರಕಟವಾಗುವುದು ಆ ಕಾಲದಲ್ಲಿ ಮೊಳೆಜೋಡಿಸುವ ಕೆಲಸವು ಮನೆಗೆಲಸದ ಒಂದು ಅಂಗವಾಗಿ ಪರಿಣಮಿಸುವುದು. ಸ್ತ್ರೀಯರಿಗೆ ಅಡಿಗೆಮಾಡಲು ಗೊತ್ತಿರುವಷ್ಟೇ ಜ್ಞಾನವು ಮೊಳೆಜೋಡಿಸುವುದರಲ್ಲಿ, ಮತ್ತು ಮುದ್ರಣ ಕಾರ್ಯದಲ್ಲೂ ಇರಬೇಕೆಂಬುದು ಒಂದು ರೂಢಿಯಾಗುತ್ತದೆ. ಈಗ ಹೊಲಿಗೆ ಯಂತ್ರಗಳಿರುವಂತೆ ೧೯೪೮ರಲ್ಲಿ ಮುದ್ರಣ ಯಂತ್ರಗಳು ಪ್ರತಿಯೊಂದು ಮನೆಗಳನ್ನು ಅಲಂಕರಿಸುವುವು. ಕಾಲದಲ್ಲಿ ಪ್ರತಿಯೊಬ್ಬ ಗಂಡನೂ ಸಂಪಾದಕನಾಗುವನು. ಮನೆಗಳಲ್ಲಿ ಈ ತನಕ ಶಿಶು ಸಂಪಾದನಾ ಕೆಲಸವು ಏಕ ಪ್ರಕಾರವಾಗಿ ನಡೆಯುತ್ತಾ ಬಂದಿರುವುದಿದ್ದರೆ, ಮುಂದೆ ಪತ್ರಿಕಾ ಕೆಲಸದಿಂದಾಗಿ ಸಂಚಿಕೆಗಳು ಪ್ರತಿದಿನ

ಹೊರಡುವ ಪರಿಸ್ಥಿತಿಯುಂಟಾಗ ಬಹುದು.

....

ಶವಾಣಿ ಅಥವಾ ಬ್ರಾಡ್‌ಕಾಸ್ಟ್ ಪದ್ಧತಿಯಿಂದಾಗಿ ವೃತ್ತಪತ್ರಿಕೆಗಳಿಗೆ ತೊಡಕುಂಟಾಗಬಹುದೆಂದು ಎದೆತಟ್ಟಿ ಹೇಳುತ್ತೇನೆ. ರೇಡಿಯೋ ಮೊದಲಾದುವುಗಳಿಂದ ವೃತ್ತಪತ್ರಿಕೆಗಳಿಗೆ ತೊಂದರೆಯಿಲ್ಲ.



“ಸಂಪಾದಕರುಗಳು ಹೆಚ್ಚಾಗಿ ಸ್ತ್ರೀಯರನ್ನೇ ತಮ್ಮ ಪತ್ರಿಕೆಯ ಪ್ರತಿನಿಧಿಗಳನ್ನಾಗಿ ಆರಿಸುವರು. ಬೀದಿಗಳಲ್ಲಿ ಸಂಪಾದಕ-ಪ್ರತಿನಿಧಿಗಳು ಒಂದೇ ಕೊಡೆಯಡಿಯಲ್ಲಿ ಹೋಗುವುದು ಸರ್ವಸಾಮಾನ್ಯವಾದೊಂದು ದೃಶ್ಯವಾಗಿ ಪರಿಣಮಿಸುವುದು”.

**ಆಕಾಶವಾಣಿಯಿಂದ ತೊಂದರೆಯಿಲ್ಲ.**

ಕೆಲವು ಭವಿಷ್ಯವಾದಿಗಳು ಆಕಾಶವಾಣಿಯಿಂದ ... ಹೇಳಿದ್ದಾರೆ. ಆದರೆ ಈ ಭವಿಷ್ಯ ಹೇಳಿರುವ ಜ್ಯೋತಿಷಿಗಳ ಭವಿಷ್ಯವು ಚೆನ್ನಾಗಿಲ್ಲವೆಂದು ನಾನು

ಇದಕ್ಕೆ ಹಲವು ಕಾರಣಗಳಿವೆ:

...

**ಕಾರಣಗಳು!**

ವರ್ತಮಾನಪತ್ರಿಗಳಲ್ಲಿ ಚರ್ಚೆ ಮಾಡಿದಂತೆ 'ರೇಡಿಯೋ'ಗಳಲ್ಲಿ ಚರ್ಚೆಮಾಡಲು ಸಾಧ್ಯವೇ ಇಲ್ಲ. ನಿಮಗೆ ಬೇಡವಾದ ವಿಷಯವನ್ನು ಎಂಬ ಪದ್ಯಗಳನ್ನು ಕೇಳಿದರೆ ಪತ್ರಿಕೆಯೋದಿದಂತಾಗುತ್ತದೆಯೇ? (೧೯೩೮ರಲ್ಲಿ ಗ್ರೆಮೊಫೋನ್ ರಿಕಾರ್ಡುಗಳು ಖಂಡಿತವಾಗಿಯೂ ಹುಚ್ಚುನಾಯಿಗಳ ಸಾಲಿಗೆ ಸೇರಿ



"ತಲೆಗೊಂದು ಪತ್ರಿಕೆಯಾದರೆ, ಗಂಡಂದಿರು ತಮ್ಮ ನೆರೆಮನೆಯ ಸ್ತ್ರೀಯರನ್ನು ಹೊಗಳಿ ಬರೆದರೆ, ಈ ದೃಶ್ಯಗಳು ಹೆಚ್ಚಾಗುವುವು.

ಪ್ರಕಟಿಸಿದ ಪತ್ರಿಕೆಯನ್ನು ನೀವು ಹರಿದು ಬಿಸಾಡಿ ಬೇರೊಂದನ್ನು ಕೊಂಡುಕೊಳ್ಳುತ್ತೀರಿ. ಆದರೆ ನಿಮ್ಮ ಕೋಪದ ಕುದುರೆಯನ್ನು ರೇಡಿಯೊದ ಮೇಲೆ ನಡೆಸುವುದು ಶಕ್ಯವೆ? ಪತ್ರಿಕೆಯನ್ನು ಹರಿದು ಬಿಸಾಡಿದಂತೆ ರೇಡಿಯೋ ಸೆಟ್ಟನ್ನು ತೆಗೆದು ಬಿಸಾಡುವಷ್ಟು ಸಾಮರ್ಥ್ಯವು ನಿಮ್ಮ ಹಣದ ಚೀಲಕ್ಕಿದೆಯೇ? ನಿಮ್ಮ ಮುಂದಿರುವ ಇನ್ನೊಂದು ದಾರಿಯೆಂದರೆ ರೇಡಿಯೊದ ಬದಲಿಗೆ "ಗ್ರೆಮೊಫೋನ್ ರಿಕಾರ್ಡ್" ಇಡುವುದು. ಆದರೆ "ಉದರ ವೈರಾಗ್ಯವಿದು" ಅಥವಾ "ಬಾಬಾರೆ ಮೋಹನಾಂಗಿ.... "ಆಡಿಸಿದಳೆಶೋದಾ...."

ಸಲ್ಪಡುತ್ತವೆ!) ಇಲ್ಲ. ಅಷ್ಟೇ ಅಲ್ಲ! ರೇಡಿಯೊವನ್ನು 'ಒಮ್ಮೆ ಕೇಳಬಹುದು. ಆದರೆ ಪತ್ರಿಕೆಗಳಂತೆ ಪುನಃ ಪುನಃ ' ಓದಲಿಕ್ಕಾಗುತ್ತದೆಯೆ? ಪತ್ರಿಕೆಯನ್ನು ಒಮ್ಮೆ, ಎರಡುಬಾರಿ- ಹೆಚ್ಚೇಕೆ, ಕೆಲಸವಿಲ್ಲದಿದ್ದರೆ ಏಳೆಂಟುಬಾರಿ ಓದಿ, ಕೊನೆಗೆ "ಬಾಟ್ಲುಉಂಟೋ ಬಾಟ್ಲ?" ಎಂದು ಹಾಡುವ ಸಂಗೀತಗಾರನಿಗೆ ಕೊಟ್ಟು ಒಂದೆರಡು ಪುಡಿಕಾಸುಗಳನ್ನಾದರೂ ಪಡೆಯಬಹುದು.

...

**ಕರ್ನಾಟಕದ ಪತ್ರಿಕೆಗಳು!**

೧೯೪೮ರಲ್ಲಿ ಕರ್ನಾಟಕದ ಪತ್ರಿಕೆಗಳಲ್ಲಿ ಬಹುದೊಡ್ಡ ಬದಲಾವಣೆಯಾಗಲಿದೆ. ಈಗಿನಂತೆ ವಿಚಿತ್ರ ಭಾರತ, ಪರತಂತ್ರ ಭಾರತ ಮೊದಲಾದ ಹೆಸರುಗಳಿರದೆ ಬೇರೆಯೇ ಜಾತಿಯ ಹೆಸರುಗಳು ತಲೆದೋರಬಹುದು. ಸುಂದರವಾಣಿ (ಸಂಪಾದಕರು ಶ್ರೀ. ಸುಂದರ ರಾಯರು) ಶ್ರೀನಿವಾಸ ವೃತ್ತ, ವಿಠಲ ಸಂದೇಶ ಶಿವರಾಮ ಬಂಧು, ಕೃಷ್ಣ ಪತ್ರಿಕಾ, ಇತ್ಯಾದಿ. ವ್ಯಕ್ತಿಗಳ ಹೆಸರಿಗೆ ವೃತ್ತ, ವಾಣಿ, ಸಂದೇಶ' ಬಂಧು ಎಂಬಿತ್ಯಾದಿಗಳನ್ನು ಸೇರಿಸಿದರಾಯಿತು.

...

**ಧ್ಯೇಯಗಳು!**

೧೯೩೮ರಲ್ಲಿ ಈಗಿನಂತೆ "ಭಾರತ ಸ್ವಾತಂತ್ರ್ಯವೇ ವಿಚಿತ್ರ ಭಾರತದ



"ಸಂಪಾದಕರ ಸ್ಥಾನವನ್ನು ಅಲಂಕರಿಸುವ ಮೊದಲು ಭಾರ ಅಳೆಯುವ ಯಂತ್ರದ ಬಳಿ ಸಾರದೆ ಗತ್ಯಂತರವಿಲ್ಲವಾಗುವುದು".

ಧ್ಯೇಯ" ವೆಂದಿರದೆ "ಶೀನಪ್ಪ ರಾಯರನ್ನು ಸಮರ್ಥಿಸುವುದೇ ನಮ್ಮ ಧ್ಯೇಯ" ವೆಂದು ವ್ಯತ್ಯಾಸ

ವಾಗಲಿದೆ. ಈ ಧ್ಯೇಯಗಳಿಂದಾಗಿ ಸ್ಥಳೀಯ ಸಂಸ್ಥೆಗಳಂಥ ಜನಪ್ರತಿನಿಧಿ ಸಂಸ್ಥೆಗಳಿಗೆ ಬದುಕುವುದು ಕಷ್ಟವಾಗಬಹುದು. ಡಾರು ಹಾಕದ ರಸ್ತೆಗಳಲ್ಲಿ ಧೂಳು ಹಾರುವಂತೆ ಈ "ವೃತ್ತ-ವಾಹನ"ಗಳ ವಿಮರ್ಶಾತ್ಮಕ ಸಂಚಾರದಿಂದ ಧೂಳು ಸಿಕ್ಕಾಬಟ್ಟೆ ಹಾರಿ, ಸ್ಥಳೀಯ ಸಂಸ್ಥೆಗಳು ಉಸಿರುಗಟ್ಟಿ ಸಾಯುವುವು. ಗಂಡಂದಿರು ತಮ್ಮ ಪತ್ರಿಕೆಗಳ ಧ್ಯೇಯಗಳಿಗೆ ವಿರೋಧವಾಗಿ ನಡೆದರೆ, ಅಥವಾ ನೆರಮನೆಯ ಸ್ತ್ರೀಯರನ್ನು ಹೊಗಳಿ ಬರೆದರೆ ಓಡಿಸಿ ಹಿಡಿಸೂಡಿ ಪ್ರಯೋಗಮಾಡುವ ಸಂಭವವೂ ತಲೆದೋರಬಹುದು.

...

**ತಲೆಬರಹಗಳು!**

ತಲೆಬರೆಹವೆಂದರೆ ಹಣೆಬರಹವೆಂದು ಅರ್ಥಮಾಡಿಕೊಳ್ಳಬಾರದು ತಲೆಬರಹವೆಂದರೆ, ಶಿರೋನಾಮೆ ಅಥವಾ (Headline) ೨೯೩೮ರಲ್ಲಿ ಈಗಿನಂತೆ ತಲೆಬರಹಗಳಲ್ಲಿ ಓದುಗರನ್ನು ಮೋಸಗೊಳಿಸಲು ಸಾಧ್ಯವಿಲ್ಲ. "ತಿಪ್ಪಾ ಶಾಸ್ತ್ರಿಗಳ ನಿಧನ" ವೆಂದು ಸಾಧ್ಯವಾದಷ್ಟು ದಪ್ಪ ಅಕ್ಷರದಲ್ಲಿ ಹಾಕುವುದು ಪ್ರಶಂಸನೀಯವಾದರೂ ತಿಪ್ಪಾ ಶಾಸ್ತ್ರಿಗಳೆಂದರೆ ಯಾರೆಂದು ತಿಳಿಯದವರಿಗೆ ಅದರಲ್ಲೊಂದು ಆಶ್ಚರ್ಯವೇನು? ತಿಪ್ಪಾ ಶಾಸ್ತ್ರಿಗಳು ಹಾಗೆಮಾಡಿರುವುದು ಒಳ್ಳೆಯದಾದರೂ ೨೯೩೮ರ ಜನರು ಅದಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡಲಿಕ್ಕಿಲ್ಲ.

...

**ವಿಶೇಷಲೇಖನಗಳು!**

೨೯೩೮ರಲ್ಲಿ ವಿಶೇಷ ಲೇಖನಗಳು ಪತ್ರಿಕೆಗಳಲ್ಲಿ ತುಂಬಿಹೋಗುವುವು. ಈಗ ರಾಜಕೀಯ ವಿಚಾರಗಳಿಗೆ ವಿಶೇಷ ಪ್ರಾಮುಖ್ಯತೆಯಿದ್ದರೆ ಮುಂದೆ ಗೃಹವಿಚಾರಗಳಿಗೆ ಹೆಚ್ಚು ಪ್ರಾಶಸ್ತ್ಯವು ಸಲ್ಲಲಿದೆ "ಕುಮಾರಿ ಸುಂದರಮ್ಮನ ಪ್ರಣಯ ಸಾಹಸ" "ಶ್ರೀ. ಕಮಲಮ್ಮನವರ ಪ್ರಶಂಸನೀಯ ಸಾರು" ಇವೇ ಮೊದಲಾದುವುಗಳನ್ನು ಜನರು ಅಭಿರುಚಿಯಿಂದ ಓದಬಹುದು. "ಯಶೋದಮ್ಮನ ಬಂಜೆತನಕ್ಕಾಗಿ ವಿವಾಹ ವಿಚ್ಛೇದನ"- "ರಾಮ ರಾವ್ ಕುಟುಂಬದಲ್ಲಿ ಪ್ರಚಂಡ ಮನೆಯುದ್ಧ" ಮುಂತಾದ ತಲೆಬರೆಹಗಳು ಹೆಚ್ಚಾಗಿ ಪತ್ರಿಕೆಗಳಲ್ಲಿ ಕಾಣಸಿಗುವುವು.

**ಸಂಪಾದಕರಿಗೆ ಪತ್ರ!**

೨೯೩೮ರಲ್ಲಿಯೂ ಸಂಪಾದಕರಿಗೆ ಪತ್ರ ಬರೆಯುವವರ ಕುಲವು ಬದುಕಿಕೊಳ್ಳುತ್ತದೆ. ಈ ಪತ್ರಗಳು ಮುಂದೆ ವಿನೋದಗಳ ಸಾಲಿಗೆ ಸೇರುವುವು. ೨೯೩೮ರಲ್ಲಿ ಯಾವುದಾದರೊಂದು ಚರ್ಚೆಯನ್ನು ಸಂಪೂರ್ಣವಾಗಿ ಓದುವ ವ್ಯಕ್ತಿಯ ಪ್ರತಿಮೆಯನ್ನು ಸಾರ್ವಜನಿಕ ಸ್ಥಳಗಳಲ್ಲಿಡಲೇಕೆಂಬ ಸೂಚನೆಗಳು ಓದುಗರಿಂದ ಮಾಡಲ್ಪಡುವುವು.

....

**ರಾಜಕೀಯ ಧುರೀಣರು!**

೨೯೩೮ರಲ್ಲಿ ರಾಜಕೀಯ ಧುರೀಣರ ಹೇಳಿಕೆಗಳಿಗೆ ಯಾವ ಪ್ರಾಮುಖ್ಯತೆಯೂ ಸಿಗಲಾರದು. ಜಾಹಿರಾತುಗಳಿಗೆ ಈಗ ಹಣ ಕೊಡುವಂತೆ ಅವರ ಭಾಷಣಗಳು ಪ್ರಕಟವಾಗಬೇಕಾದರೆ ಅಂತಹ ರಾಜಕಾರಣಿಗಳು ತುಂಬಾ ಖರ್ಚು ಮಾಡುವ ಆವಶ್ಯಕತೆಯು ತಲೆದೋರಬಹುದು. ೨೯೩೮ರಲ್ಲಿ ಹುಚ್ಚರ ಆಸ್ಪತ್ರೆಗಳಿಗೂ ರಾಜಕೀಯ ಸಂಸ್ಥೆಗಳಿಗೂ ನಿಕಟ ಸಂಬಂಧವು ಉಂಟಾಗಬಹುದು. ಹಿಟ್ಲರ್, ಮುಸ್ಸೋಲಿನಿ, ಚೇಂಬರ್ಲೆನ್, ಗಾಂಧಿ, ಜವಾಹರಲಾಲರಿಗೆ ಈಗ ಕೊಡಲ್ಪಡುವಷ್ಟು ಗೌರವವು, ಮುಂದೆ ಪತ್ರಿಕಾ ಪ್ರತಿನಿಧಿಗಳಿಗೆ ದೊರೆಯುವುದು.

...

**ರಾಜಕೀಯ ಪತ್ರಿಕೆಗಳು!**

೨೯೩೮ರಲ್ಲಿ ರಾಜಕೀಯ ವಿಚಾರಗಳಿಗಾಗಿಯೇ ಮೀಸಲಾಗಿಡುವ ಕೆಲವು ಪತ್ರಿಕೆಗಳು ಪ್ರಕಟವಾಗಲಿವೆ. ರಾಜಕೀಯ ಧುರೀಣರು ಇವುಗಳಲ್ಲಿ ಹಣಕೊಟ್ಟು ತಮ್ಮ ಭಾಷಣಗಳನ್ನು ಪ್ರಕಟಿಸುವ ಏರ್ಪಾಡು ಮಾಡುವರು. ಈ ಪತ್ರಿಕೆಗಳನ್ನು ಓದಿ "ಕೂಪನು"ಗಳನ್ನು ಕಳುಹಿಸುವವರಿಗೆ ಪತ್ರಿಕಾ ವ್ಯವಸ್ಥಾಪಕರು ಹಣಕೊಡುವ ವ್ಯವಸ್ಥೆಯನ್ನು ಮಾಡಬಹುದು. ಹಣಕೊಟ್ಟು ಪ್ರಚಾರಮಾಡುವದೇ ಇವುಗಳ ವೈಶಿಷ್ಟ್ಯ!

....

**ಸಂಪಾದಕರ ಉಡಿಗೆ ತೊಡಿಗೆ.**

೨೯೩೮ರಲ್ಲಿ ಕರ್ನಾಟದ ಪತ್ರಿಕಾ ಸಂಪಾದಕರುಗಳು ತಮ್ಮ ಮುಂಡಾಸನ್ನು ಬಿಡುವಂತಿಲ್ಲ. ಕೋಟಿನ ಮೇಲೆ ಶಾಲುಹಾಕುವುದು ಸಂಪಾದಕರುಗಳ ಒಂದು ಪೋಷಾಕೆಂದು ಭಾವಿಸಲಾಗುವುದು. ಸಂಪಾದಕರುಗಳು ಹೆಚ್ಚಾಗಿ ಸ್ತ್ರೀಯ

ರನ್ನೇ ತಮ್ಮ ಪತ್ರಿಕೆಯ ಪ್ರತಿನಿಧಿಗಳನ್ನಾಗಿ ಆರಿಸುವರು. ಬೀದಿಗಳಲ್ಲಿ ಸಂಪಾದಕ-ಪತ್ರಿನಿಧಿಗಳು ಒಂದೇ ಕೊಡೆಯಡಿಯಲ್ಲಿ ಹೋಗುವುದು ಸರ್ವಸಾಮಾನ್ಯವಾದೊಂದು ದೃಶ್ಯವಾಗಿ ಪರಿಣಮಿಸುವುದು.

...

**ಕೊಬ್ಬಿದ ದೇಹ.**

ಕೃಶರಾದವರು ಸಂಪಾದಕತ್ವಕ್ಕೆ ಅರ್ಹರಲ್ಲವೆಂಬ ನಿಯಮವು ೧೯೩೮ರಲ್ಲಿ ಮನ್ನಿಸಲ್ಪಡುವುದು. "ತಲೆಗೊಂದು ಪತ್ರಿಕೆ"ಯ ಜಾತಿಗೆ ಸೇರದ ಪತ್ರಿಕೆಗಳಲ್ಲಿ ಸಂಪಾದಕತ್ವದ ಕೆಲಸವು ಸಿಗಬೇಕಾದರೆ ಮೊದಲು ಉಮೇದ್ವಾರರನ್ನು ತಕ್ಕಡಿಯಲ್ಲಿ ತೂಗುವರು. ೨೦೦ ರಾತಲಿಗಿಂತ ಕಡಿಮೆ ಭಾರದವರಾಗಿದ್ದರೆ ಅವರು ಅನರ್ಹರೆಂದೆಣಿಸಲ್ಪಡುವರು. ಇದಕ್ಕಾಗಿಯೇ ಪತ್ರಿಕೋದ್ಯಮಿಗಳಾಗಲಿಚ್ಛಿಸುವವರು ಭೀಮನಂತೆ ತಿನ್ನಲಾರಂಭಿವರು. ಇದರ ಪರಿಣಾಮವಾಗಿ ಹೊಟ್ಟೆಯು ಬಹುದೊಡ್ಡದಾಗುವುದು. ಒಟ್ಟಿನಮೇಲನ್ನುವುದಿದ್ದರೆ ೧೯೩೮ರ ಸಂಪಾದಕರು ನಿಜವಾದ ಸಂಪಾದ-ಕರುವಾಗಿರಬೇಕು!

....

**ಅಂತರಂಗದ ಪರಿಸ್ಥಿತಿ.**

ಜಗತ್ತು ಇದ್ದಂತೆ ಇರುವುದಿದ್ದರೆ ಅಂತರಂಗವು ಕೂಡಾ ೧೯೩೮ರ ತನಕ ಪತ್ರಿಕಾರಂಗದಲ್ಲಿರಲೂ ಬಹುದು. ಅದು ಬದುಕಿರುವುದಾದರೆ ನಾನದಕ್ಕೆ ಲೇಖನಗಳನ್ನು ಬರೆಯುತ್ತಿರಲೂ ಬಹುದು!

---

ಗೆಳೆಯರ ತಂಡದ ಸದಸ್ಯರಾಗಿ ಅಖಿಲ ಕರ್ನಾಟಕದ ಗೆಳೆಯರೊಡನೆ ಸಂಬಂಧ ಬೆಳೆಸಿರಿ.

# ಗೆಳೆಯರ ತಂಡ

ವಾರ ೧೦

ಗೆಳೆಯರ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸಿ ನಿಮ್ಮ ಲೋಕ ಜ್ಞಾನವನ್ನು ಹೆಚ್ಚಿಸಿರಿ.

ಗೆಳೆಯರ ತಂಡಕ್ಕೆ ಬರೆಯುವಾಗ "ಗೆಳೆಯರ ತಂಡ", C/o ಅಂತರಂಗ, ಉಡುಪಿ, ಎಂದು ಬರೆಯಿರಿ.

ಒಲವಿನ ಗೆಳೆಯರೆ,

ನಮಗೆಲ್ಲರಿಗೂ ಪ್ರಿಯವಾಗಿರುವ ಈ ತಂಡವು ಪ್ರಾರಂಭವಾಗಿ ಒಂಭತ್ತು ವಾರಗಳು ಸಂದು ಹೋದವು. ಇಷ್ಟೊಂದು ಅಲ್ಪ ಸಮಯದಲ್ಲಿ ವಿಶಾಲ ಕರ್ನಾಟಕದ ವಿವಿಧ ಭಾಗಗಳಿಂದ ೫೦ಕ್ಕಿಂತಲೂ ಹೆಚ್ಚು ಮಂದಿ ತಂಡದ ಸದಸ್ಯರಾಗಿ ಸೇರಿರುವುದು ಬಹಳ ಸಂತೋಷದ ಸಂಗತಿಯಾಗಿದೆ. ನಮ್ಮ ತಂಡದಲ್ಲಿ ವಿವಿಧ ಜಾತಿಯ ಬಾಂಧವರಿದ್ದಾರೆ. ಸ್ತ್ರೀಯರಿದ್ದಾರೆ, ಪುರುಷರಿದ್ದಾರೆ. ಕನ್ನಡ ನಾಡಿನ ಬಂಧುಗಳಲ್ಲಿ ಪರಸ್ಪರ ಐಕ್ಯವು ತಲೆದೋರಬೇಕೆಂಬ ನಮ್ಮ ಯಥಾರ್ಥ ಆಕಾಂಕ್ಷೆಯನ್ನು ಕನ್ನಡಿಗರು ಮಾನ್ಯಮಾಡಿ ಮುಂದೆ ಬಂದಿರುವುದು ಸ್ತುತ್ಯವೆಂದು ಹೇಳಬೇಕಾಗಿಲ್ಲ. ಅನ್ಯ ಭಾಷೆಯ ಪತ್ರಿಕೆಗಳಲ್ಲಿ ಇಂತಹ ತಂಡಗಳು ಬಹು ವಿಧದ ಚಟುವಟಿಕೆಗಳನ್ನು ಮಾಡುತ್ತಿರುವುದಲ್ಲದೆ, ಅವುಗಳಿಗೆ ಜಗತ್ತಿನ ವಿವಿಧ ಭಾಗಗಳಿಂದ ಸಾವಿರಾರು ಮಂದಿ ಸದಸ್ಯರಾಗಿ ಸೇರುತ್ತಾರೆ. ಪರಸ್ಪರ ಪತ್ರವ್ಯವಹಾರದ ಏರ್ಪಾಡಿನಿಂದಾಗಿ ಸದಸ್ಯರಿಗೆ ವಿವಿಧ ಭಾಗಗಳ ಭೌಗೋಲಿಕ, ಸಾಮಾಜಿಕ ಇವೇ ಮೊದಲಾದ ಜ್ಞಾನವು ಸಿಗುವುದಲ್ಲದೆ, ನೂರಾರು ಅಡ್ಡಿ ಕಸಬುಗಳನ್ನು ಸುಧಾರಿಸಲು ಸಾಧ್ಯವಾಗುತ್ತದೆ.

ನಮ್ಮ ತಂಡವು ಪ್ರಾಯಶಃ ಸಮಗ್ರ ಕರ್ನಾಟಕದಲ್ಲಿ ಮೊದಲನೆಯದೆಂದು ಭಾವಿಸಬಹುದಾಗಿದೆ. ಇದನ್ನು ಅತ್ಯಂತ ಯಶಸ್ವಿಯಾಗಿ ಮಾಡಬೇಕೆಂಬ ಹೆಬ್ಬಯಕೆಯು ನನಗಿದೆ. ಒಮ್ಮೆಯೇ ಅತ್ತಿತ್ತ ನೋಡದೆ ಹಾರಿ, ಆರಂಭಶೂರತ್ವವನ್ನು ಪ್ರದರ್ಶಿಸಿ ಸೋಲುವುದಕ್ಕಿಂತ, ಸಾವಧಾನದಿಂದ ಮುನ್ನಡೆದು ಬಲವಾದ ತಳಹದಿಯನ್ನು ಕಟ್ಟಿ, ಸೊಗಸಾದ ಅಂತಸ್ತನ್ನು ರಚಿಸಿ, ತಂಡವನ್ನು ಯಶಸ್ವಿಯಾಗಿ ಮಾಡುವುದೇ ನಮ್ಮ ವಿಧಾನದ ಗುಟ್ಟಾಗಿದೆ. ಅದು ಕಾರಣ ನನ್ನೊಲವಿನ ಗೆಳೆಯರು ಕೆಳಗಿನ ವಿಚಾರಗಳಿಗೆ ತಮ್ಮ ನಿಜವಾದ ಲಕ್ಷ್ಯವನ್ನಿತ್ತು, ಅವುಗಳನ್ನು ಯಶಸ್ವಿಯಾಗಿ ಕಾರ್ಯರೂಪದಲ್ಲಿ ಭಾಷಾಂತರಿಸುವರೆಂದು ನನ್ನೆಣಿಕೆ.

ಮೊದಲನೆಯದಾಗಿ ನಾನು ಪ್ರಾರಂಭದಲ್ಲೇ ಹೇಳಿರುವಂತೆ ತಂಡಕ್ಕೆ ಕನಿಷ್ಟಪಕ್ಷಕ್ಕೆ ೫೦ ಮಂದಿ ಸದಸ್ಯರಾಗಬೇಕು. ಇದಾಗದ ಹೊರತು ನಮ್ಮ ಯಾವ ಚಟುವಟಿಕೆಯನ್ನೂ ಪ್ರಾರಂಭಿಸಲು ಸಾಧ್ಯವಿಲ್ಲ. ಆದುದರಿಂದ ಈಗ ಹಲವು ಪ್ರಿಯ ಗೆಳೆಯರು ದುಡಿಯುವಂತೆ, ತಂಡದ ಎಲ್ಲಾ ಸದಸ್ಯರು ಸಾಧ್ಯವಾದಷ್ಟು ಸದಸ್ಯರನ್ನು ಸೇರಿಸಲು ಯತ್ನಿಸಬೇಕು. ಪ್ರತ್ಯೇಕವಾಗಿ ತಂಡದ ಸಹೋದರಿಯರು ಆದಷ್ಟು ಸ್ತ್ರೀಯರನ್ನು ಸದಸ್ಯರನ್ನಾಗಿ ಸೇರಿಸಲು ಯತ್ನಿಸಬೇಕು.

ಎರಡನೆಯದಾಗಿ ಈ ವಿಭಾಗದಲ್ಲಿ ತಂಡದ ಸದಸ್ಯರ ಭಾವಚಿತ್ರಗಳನ್ನು ಪ್ರಕಟಿಸುವ ಏರ್ಪಾಡನ್ನು ೫೦ ಸದಸ್ಯರಾದೊಡನೆಯೇ ಮಾಡಲಿದ್ದೇನೆ. ಸದಸ್ಯರು ತಮ್ಮ ಭಾವಚಿತ್ರ, ಅದರ ಪಡಿಯಚ್ಚನ್ನು ತಯಾರಿಸುವುದಕ್ಕಾಗಿ ಒಂದು ರೂಪಾಯಿ, ಮತ್ತು ತಮ್ಮ ಕುರಿತು ಸಂಕ್ಷಿಪ್ತ ಪರಿಚಯವನ್ನು ನನಗೆ ಬರೆದು ಕಳುಹಿಸಬೇಕು. ಬೇಕಾಗಿದ್ದಲ್ಲಿ ಪಡಿಯಚ್ಚುಗಳನ್ನು ಸದಸ್ಯರ ಖರ್ಚಿನಲ್ಲಿಯೇ ಅವರಿಗೆ ಹಿಂದೆ ಕಳುಹಿಸಿಕೊಡಲಾಗುವುದು.

ಮೂರನೆಯದಾಗಿ "ಗೆಳೆಯರ ಪತ್ರವ್ಯವಹಾರ." ಯೋಗ್ಯ ವಿಚಾರಗಳ ಕುರಿತು ತಂಡದ ಸದಸ್ಯರು ಪರಸ್ಪರ ಪತ್ರವ್ಯವಹಾರ ನಡೆಸಿ, ಪರಿಚಯ ಲಾಭ, ವಿವಿಧ ಸ್ಥಳಗಳ ಜ್ಞಾನ ಸಂಗ್ರಹ, ಇವೇ ಮೊದಲಾದುವುಗಳನ್ನು ಪಡೆಯಬಹುದು. ಈ ಚಟುವಟಿಕೆಯನ್ನು ಕೂಡಾ ೫೦ ಸದಸ್ಯರಾದೊಡನೆ ಪ್ರಾರಂಭಿಸಬಹುದು. ಇದರ ವಿವರಗಳನ್ನು ಮುಂದೆ ಬರೆಯಲಿದ್ದೇನೆ.

ನಾಲ್ಕನೆಯದಾಗಿ ತಂಡದ ಮಹಾ ಸಭೆ. ನಮ್ಮ ತಂಡವು ಬಲವಾಗುತ್ತಾ ಬಂದಂತೆ ಯಾವುದಾದರೊಂದು ಸ್ಥಳದಲ್ಲಿ ಸದಸ್ಯರ ಸಭೆ

ಯೊಂದನ್ನು ಕರೆಯಲಿದ್ದೇನೆ. ಈ ಯತ್ನವನ್ನು ತಂಡದ ಸದಸ್ಯರು ಮೆಚ್ಚುವರೆಂದೇ ನನ್ನ ಭರವಸೆ. ಇವಲ್ಲದೆ ತಂಡದ ಚಟುವಟಿಕೆಗಳ ಕುರಿತು ಮುಂದೆ ಬರೆಯಲಿದ್ದೇನೆ.

ಇನ್ನೊಂದು ಮಾತು. ಗೆಳೆಯರ ತಂಡವು ರಾಜಕೀಯ ಸಂಸ್ಥೆಯೇ ಎಂದು ಹಲವರು ಕೇಳಲಾರಂಭಿಸಿದ್ದಾರೆ. ನಮ್ಮ ತಂಡವು ಪರಸ್ಪರ ಐಕ್ಯ, ಪ್ರೇಮ ಸೌಹಾರ್ದ ಮತ್ತು ಸಾಂಸ್ಕೃತಿಕ ಸಂಬಂಧವನ್ನು ಹೆಚ್ಚಿಸಲು ಹೆಣಗಾಡುವ ಗೆಳೆಯರ ಒಂದು ಕೂಟ. ತಂಡದ ಚಟುವಟಿಕೆಯಿಂದ ಯಾರಿಗೂ ಹಾನಿಯುಂಟಾಗುವಂತಿಲ್ಲವೆಂದಿಷ್ಟೇ ಹೇಳಬಯಸುತ್ತೇನೆ. ಆದುದರಿಂದ ತಂಡಕ್ಕೆ ಯಾರೂ ಬೆದರಬೇಕಾಗಿಲ್ಲ.

ನಿಮ್ಮೆಲ್ಲರ ಸಹಕಾರವನ್ನು ಬಯಸುತ್ತಿರುವ ನಿಮ್ಮೊಲವಿನ

**'ಗೆಳೆಯ'**

## ತಂಡದ ಹೊಸ ಸದಸ್ಯರು.

೧೯. ಶ್ರೀ. ಕೆ. ಆರ್. ಶಂಕರನಾರಾಯಣ ರಾವ್, ಜ್ಯುಡಿಶಿಯಲ್ ಕ್ಲಾರ್ಕ್, ಡಿಸ್ಟ್ರಿಕ್ ಆಫೀಸ್, ಚಿಕ್ಕಮಗಳೂರು.

ನಿಮ್ಮ ಸದಸ್ಯತನದ ನಂಬರು ೧೯.

೦ ೦ ೦

೨೦. ಶ್ರೀ. ಪಿ. ಶಂಕರನಾರಾಯಣ ರಾವ್, ವಿದ್ಯಾರ್ಥಿ, V ಫಾರ್ಮು, ಮಿಲಾಗ್ರಿಸ್ ಹೈಸ್ಕೂಲ್, ಕಲ್ಯಾಣಪುರ.

ನಿಮ್ಮ ಸದಸ್ಯತನದ ನಂಬರು ೨೦.

೦ ೦ ೦

೨೧. ಶ್ರೀ. ಮಾಧವ ಕಲ್ಯಾಣ ರಾವ್, ನ್ಯೂ ಇಂಗ್ಲಿಷ್ ಸ್ಕೂಲ್, ಬಾಗಲಕೋಟೆ, ವಿಜಾಪುರ ಜಿಲ್ಲೆ.

ನಿಮ್ಮ ಸದಸ್ಯತನದ ನಂಬರು ೨೧.

೦ ೦ ೦

೨೨. ಶ್ರೀ. ಆನಂದ ಶಂಕರ ಭಾಗವತ, ಸಿದ್ಧಾಪುರ.

ನಿಮ್ಮ ಸದಸ್ಯತನದ ನಂಬರು ೨೨.

೦ ೦ ೦

೨೩. ಶ್ರೀಮತಿ ಕೆ. ದ್ರೌಪದಿ ಬಾಯಿ.

c/o ಶ್ರೀ. ಟಿ. ಕೆ. ರಾಮಾಚಾರ್ ೫೧೪, ಕಾಲೇಜ್ ರೋಡ್, ಮಾಟುಂಗ, ಮುಂಬಯಿ.

ನಿಮ್ಮ ಸದಸ್ಯತನದ ನಂಬರು. ೨೩.

೦ ೦ ೦

೨೪. ಶ್ರೀ. ಬಿ. ನರಸಿಂಹ ಕಿಣಿ. ೫೨೨. ಕಾಲೇಜ್‌ರೋಡು, ಮಾಟುಂಗ, ಮುಂಬಯಿ.

ನಿಮ್ಮ ಸದಸ್ಯತನದ ನಂಬರು ೨೪.

೦ ೦ ೦

೨೫. ಶ್ರೀ. ಯಸ್. ಆರ್. ಅಂಚನ್. ೧೮೨ ಬೋರ್ ಬಜಾರ್ ಸ್ಟ್ರೀಟ್, ರೂಮ್ ನಂ. ೨೩ ಫೋರ್ಟ್, ಮುಂಬಯಿ.

ನಿಮ್ಮ ಸದಸ್ಯತನದ ನಂಬರು ೨೫.

೦ ೦ ೦

೨೬. ಶ್ರೀ. ಯಸ್. ಗುರುರಾಜಾಚಾರ್, ಇನಾಮ್‌ದಾರ್ ಮತ್ತು ಭೂಮ್ಯಾಲಿಕ, "ಬಿಗ್ ಹೌಸ್", ನಂಜನಗೂಡು.

ನಿಮ್ಮ ಸದಸ್ಯತನದ ನಂಬರು ೨೬.

---

# ಭಗದತ್ತನ ಬಹಿರಂಗ ಪತ್ರಗಳು

ದಕ್ಷಿಣ ಕನ್ನಡದ ಕಾಂಗ್ರೆಸ್ ವಾಲರಿಗೆ,

ಸಮರ ಪ್ರಿಯರೆ,

ನಿಮ್ಮ 'ಅಹಿಂಸಾತ್ಮಕ ಯುದ್ಧ'ವನ್ನು ಕಂಡು ಭಾರೀ ಮೆಚ್ಚಿಬಿಟ್ಟಿದ್ದೇನೆ. ನಿಮಿಷಕ್ಕೊಂದು ಅವಿಶ್ವಾಸದ ಠರಾವು, ಚರಂಡಿ ಪತ್ರವ್ಯವಹಾರದ ಪ್ರಕಟನೆ, ಉನ್ಮಾದವಾದ-ವಿವಾದ, ಧುರೀಣತೆಯ ಕಿಡಿಗೇಡಿತನ, ಇವೆಲ್ಲಾ ಸಾಲದುದಕ್ಕೆ ಬೈಗಳ ಸುರಿಮಳೆ- ಭೇಷ್! ಈ ಚಟುವಟಿಕೆಗಳನ್ನು ಕಂಡು ಮಹಾತ್ಮಾ ಗಾಂಧಿಯವರು ಕೂಡಾ- "ಇಂಥಾ ದೇಶಭಕ್ತರು ಭಾರತದಲ್ಲಿ ಬದುಕಿರುವರಲ್ಲಾ" ಎಂದು ಹೆಮ್ಮೆಯಿಂದ ಹಿರಿಹಿಗ್ಗಬೇಕು. ನಿಮ್ಮ 'ಮಾನನೀಯ' ಅಂತಃಕಲಹದಿಂದ ದಕ್ಷಿಣ ಕನ್ನಡದ 'ಕೀರ್ತಿ'ಯು ಹೆಚ್ಚುತ್ತಿದೆಯೆಂಬುದಕ್ಕೆ ತುಂಬುತ್ತಿರುವ ನಾಚಿಕೆಯು ಕೊಡವೇ ಸಾಕ್ಷಿ! ಕಾಂಗ್ರೆಸಿನ ಸತ್ಯ ಮತ್ತು ಅಹಿಂಸೆಗಳು ಜಿಲ್ಲೆಯಿಂದ ಎಂದೋ ಪಲಾಯನ ಮಾಡಿ ತಮ್ಮ ತಲೆ ಮರೆಸಿಕೊಂಡಿರುವುದನ್ನು ನೀವು ಸೊಗಸಾಗಿ ಮರೆತಿರುವಿರೆಂದು ನನಗೆ ಮೊದಲೇ ಗೊತ್ತು. ನಿಮ್ಮ 'ಸ್ವಂತ ತತ್ವ'ಗಳ ಘರ್ಷಣೆಯಿಂದುಂಟಾದ ಝಣ ಝಣಾತ್ಕಾರವು ಹೆಚ್ಚಿನವರ ಕಿವಿಯೊಡೆಯುತ್ತಿದೆ. ನಿಮ್ಮಲ್ಲಿಯ ಅಖಿಲಭಾರತ ಧುರೀಣ-ಧುರೀಣೆಯರ 'ಜವಾಬ್ದಾರೀ' ವರ್ತನೆ, ಧುರೀಣತೆಗಾಗಿ 'ನಿಸ್ವಾರ್ಥ' ಹೋರಾಟ, ಇವೆಲ್ಲವುಗಳೂ ಸರ್ವರ 'ಮೆಚ್ಚುಗೆ'ಯನ್ನು ಪಡೆದಿವೆ. ದೇಶದ ಉದ್ಧಾರವು ನಿಮ್ಮಂಥವರಿಂದಾಗಬೇಕು. ಹೊಡೆದಾಡಿರಿ! ಯಾವುದಾದರೊಂದು ಚಟುವಟಿಕೆ ಬೇಕು. ಕಾಂಗ್ರೆಸಿನ

(೨೮ನೆ ಪುಟ ನೋಡಿರಿ)



# ನಿಮಗೆ ಬೇಸರವಾದಾಗ ನನಗೆ ಬರೆಯಿರಿ.

ಪ್ರತಿವಾರವೂ ಕರ್ನಾಟಕದ ವಿವಿಧ ಭಾಗಗಳಿಂದ ಅಧಿಕ ಸಂಖ್ಯೆಯಲ್ಲಿ ಪ್ರಶ್ನೆಗಳು ಬರುತ್ತಿರುವುದರಿಂದ ಸ್ಥಳ ಸಂಕೋಚದ ದೆಸೆಯಿಂದ ಎಲ್ಲರ ಪ್ರಶ್ನೆಗಳು ಒಮ್ಮೆಯೇ ಉತ್ತರಿಸಲ್ಪಡಲಾಗುವುದಿಲ್ಲ.

- ಯೋಗ್ಯವಾದ ಪ್ರಶ್ನೆಗಳಿಗೆ ಯೋಗ್ಯವಾದ ಉತ್ತರಗಳು ಕೊಡಲ್ಪಡುವವು. ಕೇವಲ ತಮಾಷೆಗಾಗಿ ಕೇಳಲ್ಪಡುವಂಥವುಗಳಿಗೆ ತಮಾಷೆಯ ಉತ್ತರ ಕೊಡಲಾಗುವುದು.
- ಬಹಳ ಅಶ್ಲೀಲವಾದ ಪ್ರಶ್ನೆಗಳಿಗೆ ಈ ವಿಭಾಗದಲ್ಲಿ ಎಡೆಯಿಲ್ಲ.
- ಇತರ ಪತ್ರಿಕೆಗಳನ್ನು ಅಥವಾ ವ್ಯಕ್ತಿಗಳನ್ನು ಬೈದು ಕೇಳುವ ಪ್ರಶ್ನೆಗಳಿಗೆ ಉತ್ತರವು ಸಿಗಲಾರದು.
- ಪ್ರಶ್ನೆಗಳು ಸಾಧ್ಯವಾದಷ್ಟು ಮಟ್ಟಿಗೆ ಸಾರ್ವಜನಿಕ ಅಭಿರುಚಿಯುಳ್ಳದಾಗಿರಬೇಕು.

**ಶ್ರೀ. ಜಿ. ಎ. ಬೆಳ್ಮಣ್ಣು, ಉಡುಪಿ,**

'ಸ್ವತಂತ್ರಭಾರತದ ದಶಂಬರ ೧೩ರ ಸಂಚಿಕೆಯಲ್ಲಿ ಡಾ|ಸುಬ್ಬರಾಯನರು ಮತ್ತು ಶ್ರೀಮತಿ ಕಮಲಾದೇವಿಯರು ಮದ್ರಾಸಿನ ಗಿಂಡಿ ರೇಸ್ ಕೋರ್ಸಿಗೆ ಹೋಗುತ್ತಿರುವ ದೃಶ್ಯದ ಭಾವಚಿತ್ರವನ್ನು ನೀವು ನೋಡಿರಬೇಕೆಂದು ನನ್ನ ಭಾವನೆ. ನೋಡಿಲ್ಲವಾದರೆ ಅಗತ್ಯವಾಗಿ ನೋಡತಕ್ಕದೃಶ್ಯವಿದು. ರೇಸ್‌ಕೋರ್ಸಿನಂತಹ ಕಾಯಿದೇಶೀರು ಸುಲಿಗೆ ಸ್ಥಳಕ್ಕೆ ಮಂತ್ರಿಗಳಾದ ಡಾ| ಸುಬ್ಬರಾಯನರು ಹಾಗೂ ನಮ್ಮ ಜಿಲ್ಲೆಯ ಶ್ರೀಮತಿಯವರು ಹೋಗುತ್ತಿರುವ ದೃಶ್ಯವನ್ನು ಸ್ವತಂತ್ರಭಾರತವು ಪ್ರಕಟಿಸಿ ಕುದುರೆ ಜೂಜಿನ ಜಾಹೀರಾತು ಮಾಡಿದಂತಿದೆ. ಜನತೆಯ ಧುರೀಣರೆನ್ನಿಸಿಕೊಳ್ಳುವ ಡಾಕ್ಟರರೂ ಅಖಿಲಭಾರತ ಧುರೀಣೆಯಾಗಲು ಹೋರಾಡುತ್ತಿರುವ ದೇವಿಯವರೂ ಈ ರೀತಿ ಅದೃಷ್ಟದ ಆಟಗಳೊಡನೆ ಸಂಬಂಧವನ್ನಿಟ್ಟುಕೊಂಡು ಕುಣಿದಾಡುತ್ತಿರುವಾಗ ಗೋವೆಯ ಸೋಡ್ತಿಯ ಟಿಕೇಟುಗಳನ್ನು ಮದ್ರಾಸ್‌ಪ್ರಾಂತ್ಯದೊಳಗೆ ಬರಲಾರದಂತೆ ಮಾಡಿರುವ ಮದ್ರಾಸ್ ಸರಕಾರದ ಧೋರಣೆಯೇ ನನಗೆ ಅರ್ಥವಾಗುವುದಿಲ್ಲ. ಈ ಕುರಿತು ನಿಮ್ಮ ಅಭಿಪ್ರಾಯವೇನು?'

ವಿದ್ಯಾಮಂತ್ರಿಗಳಾದ ಡಾ|| ಸುಬ್ಬರಾಯನರು ದಕ್ಷಿಣಕನ್ನಡ ಜಿಲ್ಲೆಯ ಸಂಚಾರಕ್ಕಾಗಿ ಬಂದಾಗಲೂ ಅವರ ಸಮಯದ ಬಹುಭಾಗವನ್ನು ಅವರ ಸಂಚಾರ ಕಾರ್ಯಕ್ರಮದ ನೇತ್ರಿಯರಾಗಿದ್ದ ಶ್ರೀಮತಿ ಕಮಲಾ ದೇವಿಯವರೇ ಉಪಯೋಗಿಸಿಕೊಂಡು, ಇತರರಿಗೆ ಭೇಟಿಯ ಸಮಯವೇ ದೊರಕದಂತೆ ಮಾಡಿದರೆಂಬ ದೂರು ಕಾರ್ಕಳ ಮೊದಲಾದ ಸ್ಥಳಗಳಿಂದ ಕೇಳಿ ಬರುತ್ತಿತ್ತು. ಯಾರಿಗೆ ಗೊತ್ತು?- ಗಾಂಧಿ ಜಿನ್ನಾ- ಸುಭಾಷ ಜಿನ್ನಾ ಮಾತುಕತೆಗಳಂತೆ ಇವರಿಬ್ಬರ ಮಾತುಕತೆಗಳು ಗೋಪ್ಯವೂ ಮಹತ್ವದ್ದೂ ಆಗಿರಬಹುದು. ಜಿಲ್ಲೆಯ ಕಾಂಗ್ರೆಸ್ ಅವ್ಯವಸ್ಥೆಗೂ ಇವರಿಬ್ಬರ ಮಾತುಕತೆಗಳಿಗೂ ನಿಕಟ ಸಂಬಂಧವಿರಲೂ ಬಹುದು. ಇದೇ ಮಾತುಕತೆಯನ್ನು ಪೂರೈಸಲು ದಕ್ಷಿಣಕನ್ನಡದಲ್ಲಿ ಸಮಯಸಾಕಾಗದೆ ಶ್ರೀಮತಿಯವರು ಅವರೊಂದಿಗೆ ಮದ್ರಾಸಿಗೆ ಹೋಗಿರಲೂ ಬಹುದು. ಡಾ| ಸುಬ್ಬರಾಯನರು ಕುದುರೆ ಜೂಜಿನ ಅಧ್ಯಕ್ಷರಾಗಿರುವುದರಿಂದ ಮಾತುಕತೆಯನ್ನು ಮುಂದರಿಸುತ್ತಾ ಶ್ರೀಮತಿಯವರು ಅಲ್ಲಿಗೆ ಹೋಗಿರಬೇಕೆ ವಿನಹ ರೇಸ್ ಕೋರ್ಸಿಗೂ ಬಡವರ ಮುಂದಾಳಾದ ಶ್ರೀಮತಿಯವರಿಗೂ ಸಂಬಂಧವನ್ನು ಕಲ್ಪಿಸಿ ನೀವು ಮಹಾ ಅಪರಾಧವನ್ನು ಮಾಡಿದ್ದೀರಿ! ರಾಜಕೀಯ ಕಾರಣಗಳಿಂದ ಯಾರು ಎಲ್ಲಿಗೆ ಹೋಗಬೇಕಾಗುವುದಿಲ್ಲ. ಶ್ರೀಮತಿ ಸುಬ್ಬರಾಯನರು ಡಿಲ್ಲಿಗೆ ಹೋಗಿಲ್ಲವೇ?- ಶ್ರೀಮತಿ ಕಮಲಾ ದೇವಿಯರು ಮದ್ರಾಸಿಗೆ ಹೋಗಿದ್ದಾರೆ.

ಇನ್ನು ಡಾಕ್ಟರ್ ಸುಬ್ಬರಾಯನರ ವಿಚಾರ. ಅವರು ಕುದುರೆ ಜೂಜಿನ ಅಧ್ಯಕ್ಷರಾಗಬಹುದೆಂದು ಮದ್ರಾಸಿದ ಪ್ರಧಾನರಾದ ರಾಜಾಜಿ

ಯವರೇ ಸಮ್ಮತಿಯಿತ್ತಿರುವರೆಂದು ಮಾನ್ಯ ಮಂತ್ರಿಗಳು ಮಂಗಳೂರು ಮೈದಾನಿನಲ್ಲಿ ಹೇಳಿರುವುದು ನಿಮಗೆ ಗೊತ್ತಿಲ್ಲವೇ? ಧುರೀಣರ ವರ್ತನೆಗಳಲ್ಲಿ ಕುಂದುಕೊರತೆಗಳನ್ನು ಹುಡುಕಲು ನೀವು ರಾಜಾಜಿಯವರಷ್ಟು ದೊಡ್ಡವರೆ? ನಿಮ್ಮ ಸರಕಾರವು ಅವರಿಗೆ ಕೊಡುವ ಬರೀ ೫೦೦ ರೂಪಾಯಿಗಾಗಿ ಅವರು ಎಂಥೆಂಥ ತ್ಯಾಗಗಳನ್ನು ಮಾಡಬೇಕೆಂದು ನಿಮ್ಮ ಬಯಕೆ? ಗೋವಾ ಸೋಡ್ತಿಯೊಡನೆ ಮದ್ರಾಸ್ ಮಂತ್ರಿಮಂಡಲದ ಹತ್ತು ಮಂದಿಯಲ್ಲಿ ಒಬ್ಬರಿಗೂ ಸಂಬಂಧವಿಲ್ಲವೆಂಬುದು ನಿಮಗೆ ತಿಳಿದಿಲ್ಲವೆ? ಸಾರ್ವಜನಿಕ ನೀತಿಗಳನ್ನು ಮಾಡುವವರೂ ಮುರಿಯುವವರೂ ಧುರೀಣರೇ ಎಂಬುದನ್ನು ನೀವು ಮರೆಯಬಾರದು.

ಯು. ನಾಗಪ್ಪಕಾಮತ್, ಉಡುಪಿ.

---

“ಉಡುಪಿ ತಾಲೂಕು ಕೃಷಿಕಮಜೂರ ಸಂಘದವರ ನೇತೃತ್ವದಲ್ಲಿ ಜರಗಿದ ಹೈದರಾಬಾದು ದಿನಾಚರಣೆಯ ವಿ ಯವಾಗಿ ಭಾಷಣಮಾಡುತ್ತಾ ಕಾಂಗ್ರೆಸ್ ಸದಸ್ಯರೊಬ್ಬರು ಪ್ರಾಂತಿಕ ಕಾಂಗ್ರೆಸ್ ಕಮಿಟಿ ಆಜ್ಞೆ ಮೇರೆಗೆ ಇಂಥಾ ದಿನಾಚರಣೆಗಳನ್ನು ಸ್ಥಳೀಯ ಕಾಂಗ್ರೆಸ್ ಕಮಿಟಿಯವರು ಆಚರಿಸಬೇಕಿತ್ತಾದರೂ, ಸ್ಥಳೀಯ ಅಧಿಕಾರಿಗಳು, ತಮ್ಮ ತಮ್ಮೊಳಗೇ ಜಗಳವಾಡುತ್ತಿರುವರಲ್ಲದೆ, ಪರಸ್ಪರ ಸಹಾಯ ಸಹಾನುಭೂತಿಗಳನ್ನು ಪ್ರದರ್ಶಿಸುವ ಅಗತ್ಯವುಳ್ಳ ಕಾರ್ಯಕ್ರಮಗಳನ್ನು ವಹಿಸದೆ, ಶೋಚನೀಯ ಧೋರಣೆ ವಹಿಸಿರುವರೆಂದೂ, ಗತವರುಷದಲ್ಲಿ ಕಾಂಗ್ರೆಸ್ ಕಮಿಟಿಯ ಹಣವನ್ನು ದುರುಪಯೋಗಗೊಳಿಸಿದ ಕೆಲವರು ಈ ವರುಷವೂ ಅಧಿಕಾರಸ್ಥಾನದಲ್ಲಿರುವದರಿಂದಲೇ ಕೆಲಸಗಳ ಅಭಾವಕ್ಕೆ ಕಾರಣವೆಂದೂ ಹೇಳಿರುವುದರ ಅವಶ್ಯಕತೆಯೇನಾದರೂ ಇದ್ದರೆ ತಿಳಿಸಿರಿ.

ಕಾಂಗ್ರೆಸ್ ಸದಸ್ಯರು ಕಾಂಗ್ರೆಸ್ ಅಧಿಕಾರೀ ವರ್ಗದವರನ್ನು ಸಾರ್ವಜನಿಕ ಸಭೆಯಲ್ಲಿ ಮೇಲಿನಂತೆ ಟೀಕಿಸಬೇಕಾದರೆ ಬಲವಾದ ಆಧಾರಗಳಿರಲೇಬೇಕೆಂಬುದು ಸುಸ್ಪಷ್ಟ. ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರ ಸೂಚನೆಯನ್ನು ಮನ್ನಿಸದೆ ಉಡುಪಿ ತಾಲೂಕು ಕಾಂಗ್ರೆಸ್ ಕಮಿಟಿಯು ಸುಮ್ಮನಿರುವುದನ್ನು ನೋಡಿದರೆ ಅದರ ಪರಿಸ್ಥಿತಿಯು ಚೆನ್ನಾಗಿಲ್ಲವೆಂದು ಹೇಳಬೇಕಾಗಿಲ್ಲ. ಸುವ್ಯವಸ್ಥೆಯ ಪ್ರಥಮ ಹೊಸ್ತಿಲಿನಂತಿರುವ ಲೆಖ್ಖಪತ್ರಗಳ ಪ್ರಕಟನೆಗೆ ಇನ್ನೂ ತನ್ನ ಲಕ್ಷ್ಯವನ್ನು ಕೊಡದಿರುವ ಆ ಕಮಿಟಿಯ ಹೃದಯವು ಯೋಗ್ಯ ಪರಿಸ್ಥಿತಿಯಲ್ಲಿಲ್ಲವೆಂದು ಹೇಳಲೆಡೆಯಿರುವುದರಿಂದ ಆ “ಕಾಂಗ್ರೆಸ್ ಸದಸ್ಯ”ರು ಟೀಕೆ ಮಾಡಲು ಪ್ರಾರಂಭಿಸಿರುವುದು ಆಶ್ಚರ್ಯವಲ್ಲ. ಆದರೆ ಪ್ರಾಥಮಿಕ ಕಾಂಗ್ರೆಸ್ ಸದಸ್ಯರಾದ ಅವರು ಯಥಾರ್ಥ ಭಾವದಿಂದ ಮುನ್ನಡೆದು, ಕಮಿಟಿಯ ಸಭೆಯೊಂದನ್ನು ಕರೆಯಿಸಿ, ಲೆಖ್ಖಪತ್ರಗಳ ಪ್ರಕಟನೆಯ ಏರ್ಪಾಡು ಮಾಡಿ, ತಮ್ಮೂರಿನ ಕಾಂಗ್ರೆಸ್ ಸಂಸ್ಥೆಯನ್ನು ಉಚ್ಚಾವಸ್ಥೆಗೆ ತರಲು ಪ್ರಯತ್ನಿಸಬಾರದೇಕೆ? ಬರಿಯ ಟೀಕೆಗಳಿಂದ ವಿಶೇಷ ಪ್ರಯೋಜನವಾಗುವುದಿಲ್ಲ. ಟೀಕೆಗೆ ಕಾರ್ಯದ ಬೆಂಬಲವಿರಬೇಕು. ಪ್ರತಿಯೊಬ್ಬರೂ ಟೀಕಿಸುವುದಲ್ಲದೆ ಕಾರ್ಯರೂಪದಲ್ಲಿ ಯಾವುದನ್ನೂ ಮಾಡಬಯಸುವುದಿಲ್ಲ. ಈ ಮನೋವೃತ್ತಿಯಿಂದಾಗಿ ದಕ್ಷಿಣ ಕನ್ನಡದಲ್ಲಿ ಕಾಂಗ್ರೆಸ್ ರಂಗದಲ್ಲಿ ಅಂತಃಕಲಹವು ಹೆಚ್ಚುತ್ತಿದೆ. ಹೊಡೆದಾಟವೇ ಜಿಲ್ಲೆಯ ಕಾಂಗ್ರೆಸ್ ಕಾರ್ಯಕರ್ತರ ವೈಶಿಷ್ಟ್ಯವೆನಿಸಿರುವಾಗ ಉಡುಪಿಯವರೂ ಅವರಲ್ಲಿ ನಿರತರಾಗಿರುವುದರಲ್ಲಿ ಯಾವ ಆಶ್ಚರ್ಯವಿದೆ?

○ ○ ○

ಶ್ರೀ. ಆರ್. ವಿ. ಪ್ರೋಕಳೆ ಕುಮಟಾ.

---

ತಮ್ಮ ಅಂತರಂಗ ಪತ್ರಿಕೆಯ ಪ್ರತಿಯೊಂದು ಸಂಚಿಕೆಯ ಮುಖಪತ್ರಿಕೆಯ ಮೇಲೆ ಸ್ತ್ರೀ ಚಿತ್ರವಿರುವುದರಿಂದ ಬಹುಜನ ವಾಚಕರು ಅಸಹ್ಯಪಡುತ್ತಾರೆ. ಆದ್ದರಿಂದ ತಾವು ಇನ್ನು ಮುಂದೆ ಅಂಥ ಚಿತ್ರಗಳ ಬದಲು ಕೊಂಗ್ರೆಸ ಮುಂದಾಳುಗಳ ಭಾವಚಿತ್ರಗಳನ್ನು ಮುದ್ರಿಸುವ ಏರ್ಪಾಡುಮಾಡಿದರೆ ತಮ್ಮ ಪತ್ರಿಕೆಗಳು ಸುಂದರವಾಗಿ ಓದುವವರ ಮೆಚ್ಚುಗೆಗೆ ಪಾತ್ರವಾಗುವವೆಂಬ ಭರವಸೆ. ಆದ್ದರಿಂದ ಹಾಗೆ ಮಾಡಲಾಗುವದೋ?

ಸ್ತ್ರೀಯರ ಕುರಿತು ನಿಮಗೆ ಅದೊಂದು ತರದ ವಿಚಿತ್ರ ಅಭಿಪ್ರಾಯವಿದೆಯೆಂದು ನಿಮ್ಮ ಪ್ರಶ್ನೆಯಿಂದ ವಿಶದವಾಗುತ್ತದೆ. ಸ್ತ್ರೀಯರ ಚಿತ್ರಗಳಿಂದಾಗಿ ಯಾರೂ ಅಸಹ್ಯಪಡುವ ಆವಶ್ಯಕತೆಯಿಲ್ಲ. ಹಾಗಿದ್ದರೆ ಪುರುಷರ ಚಿತ್ರವನ್ನು ಕಂಡು ಸ್ತ್ರೀಯರು ಅಸಹ್ಯಪಡಬೇಕಲ್ಲವೆ? ಜಗತ್ತಿನಲ್ಲಿ ಸ್ತ್ರೀಯು ಸ್ಥಾನದ ಮಹತ್ವದ ಕುರಿತು ನೀವು ಒಂದಿಷ್ಟು ಯೋಚಿಸಿದರೆ ನಿಮ್ಮ ಅಸಹ್ಯಭಾವವು ಮಾಯವಾಗಿ, ಪೂಜ್ಯಭಾವವು ತಲೆದೋರಬಹುದು. ಹೇಗಿದ್ದರೂ, ನಮ್ಮ ಪ್ರಿಯ ವಾಚಕರಲ್ಲೊಬ್ಬರಾದ ನಿಮ್ಮ ಸೂಚನೆಯನ್ನು ನಾವು ಮನ್ನಿಸಿ, ಸದ್ಯದಲ್ಲಿಯೇ ಕಾಂಗ್ರೆಸ್ ಮುಂದಾಳುಗಳ ದೊಡ್ಡ ಭಾವಚಿತ್ರಗಳನ್ನು ಮುದ್ರಿಸುವ ಏರ್ಪಾಡು ಮಾಡಲಿದ್ದೇವೆ.

○ ○ ○

ನರಸಿಂಹಸುಬ್ರಾಯ ನಾಯ್ಕ
ಬಸ್ರೂರು.

---

ನಿಮ್ಮ ಪ್ರತಿಯೊಂದು ಅಂತರಂಗ ಸಂ

ಚಿಕೆಯು 'ನಿಮಗೆ ಬೇಸರವಾದಾಗ ನನಗೆ ಬರೆಯಿರಿ ಎಂತ ತಿಳಿಸುವುದು. ಸರಿಯಷ್ಟೆ. ಆದರೆ ನಿಮಗೆ ಬೇಸರವಾದಾಗ ನೀವು ಯಾರಿಗೆ ಬರೆಯುವಿರಿ? ಎಂಬುದನ್ನು ದಯಮಾಡಿ ತಿಳಿಸುವಿರಾಗಿ ಅಪೇಕ್ಷಿಸುತ್ತೇನೆ?

ನಿಮ್ಮ ಪ್ರಶ್ನೆಯನ್ನೋದಿ ನನಗೇ "ಬೇಸರ"ವಾಗಲಾರಂಭಿಸಿದೆ. ಯಾರಿಗೆ ಬರೆಯಲೆಂಬ ಮಹಾ ಯೋಚನೆಯು ನನ್ನಲ್ಲಿ ತಲೆದೋರಿಬಿಟ್ಟಿದೆ. ಅಲ್ಲದೆ ಮಾನವಕೋಟಿಯು ದೇವನನ್ನು ಪ್ರಾರ್ಥಿಸಿ ತನ್ನ ಕಷ್ಟಸಂಕಷ್ಟಗಳನ್ನು ನಿವಾರಿಸಲು ಯತ್ನಿಸುತ್ತಿರುವಾಗ, ದೇವನು ತನ್ನ ಕಷ್ಟಗಳ ನಿವಾರಣೆಗಾಗಿ ಯಾರನ್ನು ಪ್ರಾರ್ಥಿಸಬಹುದು ಎಂಬ ಪ್ರಶ್ನೆಯೂ ಉತ್ಪನ್ನವಾಗಿದೆ. ಈ ಕುರಿತು ನಿಮಗೇನಾದರೂ ತಿಳಿದಿದ್ದರೆ ನನಗೆ ದಯವಿಟ್ಟು ತಿಳಿಸಬಾರದೇಕೆ?

೦ ೦ ೦

ಶ್ರೀ. ಯನ್. ಜಿ. ಯಸ್.
ಮೂರ್ತಿ, ಶಿವಮೊಗ್ಗಾ.

ನಾನೊಬ್ಬ ಇಪ್ಪತ್ತು ವರುಷದ ತರುಣ. ನನಗೆ ಚಲಚ್ಚಿತ್ರ ಕೈಗಾರಿಕೆಗೆ ಸೇರಿ, ಪ್ರಸಿದ್ಧ ನಟರಲ್ಲಿ ನಾನೂ ಒಬ್ಬನೆನಿಸಿಕೊಳ್ಳಬೇಕೆಂದು ಆಶೆಯು ಬಹಳವಾಗಿ ಪೀಡಿಸುತ್ತದೆ. ಇದಕ್ಕೆ ಪರಿಹಾರ ನೀವು ಕೊಡುವ ಸಲಹೆಗಳೇ ಎಂದು ಹೇಳಬೇಕಾಗಿದೆ. ನನಗೆ ಕಂಠ ಚೆನ್ನಾಗಿದೆ ಹಾಗೂ ಸಂಗೀತದಲ್ಲಿ ಹೆಚ್ಚು ಅಭಿರುಚಿಯುಳ್ಳವನಾಗಿದ್ದೇನೆ. ಇಂಗ್ಲೀಷು, ಕನ್ನಡ ಮತ್ತು ಹಿಂದಿ ಭಾಷೆಗಳ ಪರಿಚಯವೂ ಇದೆ. ಒಟ್ಟನಲ್ಲಿ ಹೇಳುವುದಾದರೆ ಸಿನಮಾ ಕೈಗಾರಿಕೆಗೆ ಸೇರುವ ಹಾಗೆಯೇ ಇದ್ದೇನೆಂದಿಟ್ಟುಕೊಳ್ಳಿ.

ನನಗೆ ಪ್ರಸಿದ್ಧ ಸಿನೆಮ ಡೈರೆಕ್ಟರರಾರೆಂಬುದನ್ನು ತಿಳಿಸಿ, ಅವರ ಕಂಪೆನಿಗೆ ನಾನು ಸೇರಿ, ಪ್ರಸಿದ್ಧ ನಟನೆನಿಸಿಕೊಳ್ಳುವ ಹಾಗೆ ಸರಿಯಾದ ರೀತಿಯಲ್ಲಿ ಸಲಹೆಗಳನ್ನು ಕೊಡಬಲ್ಲಿರಾ?''

ನಿಮ್ಮ ಪ್ರಾಯ, ಕಂಠ, ಮತ್ತು ಭಾಷಾಪರಿಚಯ ಇವೆಲ್ಲವುಗಳೂ ನಿಮ್ಮ ಆಶೆಯನ್ನು ಪೂರ್ತಿಗೊಳಿಸಲು ಸಹಾಯಕಾರಿಗಳಾಗಿವೆ. ಚಲಚ್ಚಿತ್ರ ನಟನಾಗಬೇಕೆಂಬ ಆಶೆಯು ನಿಜವಾಗಿಯೂ ನಿಮ್ಮಲ್ಲಿದ್ದರೆ, ನೀವು ಆದಷ್ಟು ಬೇಗನೆ ಆ ಕಲೆಯನ್ನು ಅಭ್ಯಾಸಮಾಡುವದು ಅವಶ್ಯವಾಗಿದೆ. ನಮ್ಮ ದೇಶದಲ್ಲಿರುವ ಚಲನಚಿತ್ರ ಕಂಪೆನಿಗಳಲ್ಲಿ ಹಲವು ಪ್ರಸಿದ್ಧ ನಿರ್ದೇಶಕರಿದ್ದರೂ ಸುಪ್ರಸಿದ್ಧರಾದ ಮೂವ ಹೆಸರನ್ನು ನಿಮಗೆ ಸೂಚಿಸುತ್ತೇನೆ. ಪ್ರಭಾತ ಕಂಪೆನಿಯ ಡೈರೆಕ್ಟರ್ ಶಾಂತಾರಾಮನವರು ಬಹಳ ಪ್ರಸಿದ್ಧರೆಂಬುದನ್ನು ನೀವು ಈಗಾಗಲೇ ತಿಳಿದಿರಬಹುದು. ಹಲವು ಪ್ರಸಿದ್ಧ ನಟನಟಿಯರ ಶ್ರೇಯಸ್ಸಿಗೆ ಇವರೇ ಕಾರಣರು. ಕಲ್ಕತ್ತದ ನ್ಯೂ ಥಿಯೇಟರಿನಲ್ಲಿ ಕೂಡಾ ಅನೇಕ ಮಂದಿ ಪ್ರಸಿದ್ಧ ನಿರ್ದೇಶಕರಿದ್ದಾರೆ. ಡೈರೆಕ್ಟರ್ ನಿತಿನ್ ಬೋಸ್‌ರವರು ನಿರ್ದೇಶನ ಕಾರ್ಯದಲ್ಲಿ ಬಹಳ ಪ್ರವೀಣರು. ಪಿ. ಸಿ. ಬರುವಾ-ಇವರು ದೇವದಾಸ ಮೊದಲಾದ ಸುಪ್ರಸಿದ್ಧ ಚಿತ್ರಗಳಿಂದಾಗಿ ಹೆಚ್ಚಿನವರಿಗೆ ಚಿರಪರಿಚಿತರೆನಿಸಿದ್ದಾರೆ. ಹಲವು ಯಶಸ್ವೀಚಿತ್ರಗಳನ್ನು ನಿರ್ದೇಶಿಸಿದ ದೇವಕೀ ಬೋಸರು ಕೂಡಾ ಸಾಮಾನ್ಯರಲ್ಲ. ಮೇಲೆ ಸೂಚಿಸಿದವರ ಪೈಕಿ ಯಾರಿಗಾದರೊಬ್ಬರಿಗೆ ಬರೆದು ಅವರು ಕೊಡಬಹುದಾದ ಸೂಚನೆಗಳಿಗನುಸಾರವಾಗಿ ನಡೆದು ಚಲಚ್ಚಿತ್ರ ರಂಗಕ್ಕೆ ಕಾಲಿಡುವ ಏರ್ಪಾಡು ಮಾಡಿರಿ. ನಿಮ್ಮಲ್ಲಿ ನಿಜವಾದ ಉತ್ಸಾಹವಿದ್ದರೆ ರೊಮ್ಮೆ ನೀವು ಅಭಿನಯಿಸಿದ ಎಂದಾದ ಚಿತ್ರವನ್ನು ನಾನು ಹೆಮ್ಮೆಯಿಂದ ನೋಡಲೂ ಬಹುದು.

೦ ೦ ೦

ಮಾಸ್ಟರ್ ಬಿ. ಯಸ್. ಯಂ.
ಕುಮಾರ್, ವಿದ್ಯಾರ್ಥಿ,
ಮಂಗಳೂರು.

"ನನ್ನ ಪ್ರಾಯವು ಈಗ ಇಪ್ಪತ್ತೊಂದು ವರ್ಷ; ಆದರೂ ನನ್ನ ನಡತೆಯಲ್ಲಿ ಯಾವದೊಂದೂ ಕೊರತೆಯು ಇರುವುದಿಲ್ಲ. ಕೆಟ್ಟ ಹವ್ಯಾಸಗಳಿಗೆ ನಾನು ಎಂದೂ ಎಡೆಗೊಟ್ಟವನಲ್ಲ. ಆದರೆ ಒಂದು ವಿಷಯದಲ್ಲಿ ಮಾತ್ರ ಬಹಳ ಕಾತರಯುಕ್ತನಾಗಿರುತ್ತೇನೆ. ನಾನು ಸ್ವಲ್ಪ ನೀಳವಾದವನಾದುದರಿಂದ ಅದಕ್ಕನುಗುಣವಾದ ತೋರವು ನನ್ನ ಶರೀರದಲ್ಲಿಲ್ಲದಿರುವುದೇ ಇದಕ್ಕೆ ಕಾರಣ. ನನ್ನ ಶರೀರಪ್ರಕೃತಿಯು ಬಹಳ ತೆಳ್ಳಗಿನದಾದುದರಿಂದ ತೋರವಾಗಿ ಬೆಳೆಯುವ ಅಭಿಲಾಷೆಯು ನನ್ನನ್ನು ಕಾಡುತ್ತಿದೆ; ಇದಕ್ಕೊಂದುಪಾಯವನ್ನು ಸೂಚಿಸುವಿರಾ?''

ಸಾಮಾನ್ಯವಾಗಿ ಮನುಷ್ಯರಿಗೆ ತಮಗಿರುವುದರಲ್ಲಿ ತೃಪ್ತಿಯಿರುವುದಿಲ್ಲ. ತೋರವಾಗಿದ್ದವರಿಗೆ ಸಪೂರವಾಗಬೇಕೆಂಬ ಆಶೆ. ಸಪೂರವಾದವರಿಗೆ ತೋರವಾಗಬೇಕೆಂಬ ಆತುರ. ಹೀಗಿರುವಾಗ ನಿಮಗೆ ತೋರವಾಗಲು ಮನಸ್ಸಾದುದರಲ್ಲಿ ಆಶ್ಚರ್ಯವಿಲ್ಲ. ಆದರೆ ನೀವು ಕೇವಲ ತೋರವಾಗಿ ಬೆಳೆಯುವುದರಿಂದ ಪ್ರಯೋಜನವಿಲ್ಲ. ವ್ಯಾಯಾಮದಿಂದ ನಿಮ್ಮ ಶರೀರದ ಸ್ನಾಯುಖಂಡಗಳು ಬಲವಾಗಬೇಕು. ಆಗ ನಿಮ್ಮ ಶರೀರಕ್ಕೊಂದು ತರದ ಸೌಂದರ್ಯವುಂಟಾಗುತ್ತದೆ. ನಿಮ್ಮ ಗೆಳೆಯರು ನಿಮ್ಮ ದೇಹವನ್ನು ಕಂಡು ಮೆಚ್ಚುತ್ತಾರೆ. ಅದು ಕಾರಣ ಉತ್ತಮವಾದ ವ್ಯಾಯಾಮವನ್ನು ಬೇಗನೆ ಪ್ರಾರಂಭಿಸಿ, ಪುಷ್ಟಿಕರವಾದ ಆಹಾರವನ್ನು ಮಿತಪ್ರಮಾಣದಲ್ಲಿ ಸೇವಿಸಿರಿ. ಕ್ರಮಪ್ರಕಾರವಾಗಿ ನೀವು ವ್ಯಾಯಾಮ ಮಾಡುತ್ತಾ ಬಂದರೆ ನಿಮ್ಮ ಆರೋಗ್ಯವು ಸುಧಾರಿಸುವುದಲ್ಲದೆ, ಶರೀರವು ಬಹಳ ಸುಂದರವಾಗಿ ನಿಮ್ಮ ಆಶೆಯು ಪೂರ್ತಿಯಾಗಬಹುದು.



### ನಿಮ್ಮನ್ನು ಹೆದರಿಸುವ ಆ ಜೈಲು!

# ಕನ್ನಾನೂರಿನಿಂದ ವೆಲ್ಲೂರಿಗೆ ವರ್ಗ!

ಢಕಾಯಿತಿನ ತಕ್ಷೀರಿಗೊಳಗಾಗಿ ಏಳು ವರ್ಷ ಕಠಿನ ಶಿಕ್ಷೆ ಪಡೆದು ಮದ್ರಾಸ್ ಪ್ರಾಂತ್ಯದ ಬೇರೆ ಬೇರೆ ಜೈಲುಗಳಲ್ಲಿದ್ದು ಬಂದವರೊಬ್ಬರ ಆತ್ಮಕಥೆಯಿದು.

## ಲೇಖಾಂಕ ೮.

ಕನ್ನಾನೂರು ಜೈಲಿನ ಕಟ್ಟಡಗಳ ಮತ್ತು ಕೈದಿಗಳ ತರಗತಿಗಳ, ಕೆಲಸಗಳ ತಕ್ಕಮಟ್ಟಿನ ಪರಿಚಯವನ್ನು ನಿಮಗೆ ನಾನು ಕಳದ ವಾರದ ಸಂಚಿಕೆಯಲ್ಲಿ ಮಾಡಿಕೊಟ್ಟೆ. ಅದನ್ನೋದಿದ ನಿಮ್ಮ ಪೈಕಿ ತೀಕ್ಷ್ಣಬುದ್ಧಿಯುಳ್ಳ ಕೆಲವರಿಗೆ ಒಂದು ಪ್ರಶ್ನೆ ಹೊಳೆದಿರಬಹುದು. ಊರಿನಲ್ಲಿ ಕ್ರಮತಪ್ಪಿ ನಡೆದವರನ್ನು ಹಿಡಿದು ಜೈಲಿಗೆ ಹಾಕುತ್ತಾರಪ್ಪಾ–ಒಂದು ಸಣ್ಣ ಊರೇ ಆಗಿರುವ ಜೈಲಿನೊಳಗೇ ಅನ್ಯಾಯ ಮಾಡಿದರೆ ಅಂಥವರನ್ನೇನು ಮಾಡುತ್ತಾರೆ? ಎಂದು. ಅಂಥವರಿಗೆ ಜೈಲಿನ ಜೈಲುಗಳಾಗಿರುವ ಕತ್ತಲೆಕೋಣೆಗಳಿವೆ. ಅವುಗಳೊಳಗಿನ ಶಿಕ್ಷೆಯ ಕೆಲವು ಮಾದರಿಗಳನ್ನು ನಿಮಗೆ ಸಂದರ್ಭಾನುಸಾರ ತೋರಿಸಿಕೊಡಲಿರುವೆನು.

### ಜೈಲನ್ನ!

ಈಗ ಜೈಲನ್ನದ ರುಚಿಯನ್ನೊಂದಿಷ್ಟು ತಿಳಿಯಿರಿ. ಬೆಳಗ್ಗಿನ ಗಂಜಿ ಮತ್ತು ಚಟ್ನಿಯನ್ನು ಈ ಮೊದಲೇ ಬಡಿಸಿರುವೆನಷ್ಟೆ. ನಿಮಗದು ಇಷ್ಟು ಬೇಗನೆ ಜೀರ್ಣವಾಗಿರಲಾರದೆಂದು ನನಗೆ ಗೊತ್ತು. ಇನ್ನು ಮಧ್ಯಾಹ್ನದ ಊಟ. ಜೈಲೂಟವು ನಿಮ್ಮ ಹೊಟ್ಟೆಯ ಅಳತೆಯನ್ನು ಆಧರಿಸಿಕೊಂಡಿಲ್ಲ. ಅನ್ನವನ್ನು ಜೈಲಿನ ಒಂದು ಮಾನದಿಂದಲೇ ಅಳೆದು ಮುದ್ರೆಯೊತ್ತುತ್ತಾರೆ. ಈ ಮುದ್ರೆಗೆ 'ಇಡ್ಲಿ' ಎಂದು ಹೆಸರು. ಗೇಣುದ್ದ ಹೊಟ್ಟೆಯವರಿರಲಿ, ಮಾರುದ್ದ ಹೊಟ್ಟೆಯವರಿರಲಿ–ಆ ಹೊಟ್ಟೆಯಲ್ಲಿ ಇಷ್ಟೇ ಸ್ಥಳವುಂಟೆಂಬುದನ್ನು ತಿಳಿದುಕೊಂಡಲ್ಲ, ನಿಮಗೂ ಒಂದು ಹೊಟ್ಟೆಯಿದೆ ಎಂಬ ಆಧಾರದ ಮೇಲೆ ಒಂದೇ ರೀತಿಯ ಒಂದೊಂದು ಇಡ್ಲಿಯು ನಿಮ್ಮ ಬಟ್ಟಲಿಗೆ ಮಧ್ಯಾಹ್ನ ಹನ್ನೊಂದು ಘಂಟೆಗೆ ತಪ್ಪದೆ ಬೀಳುವದು. 'ಹಿಂದೂ ಮುಸ್ಲಿಮ್ ಕ್ರೈಸ್ತ ಸಿಖ್ ಪಾರ್ಸೀಕೀ ಜೈ!' ಎನ್ನುವ ಐಕ್ಯವಾದಿಗಳು ತಮ್ಮ ಕಾರ್ಯಕ್ಕೆ ಈ ಇಡ್ಲಿಯನ್ನು ಮಾದರಿಯಾಗಿಟ್ಟುಕೊಳ್ಳಬಹುದು. ಅನ್ನ ಕಲ್ಲು ಹುಳಹುಪ್ಪಡಿ ಕಸಕಡ್ಡಿಗಳೆಲ್ಲಾ, ತಮ್ಮೊಳಗಿನ ಭೇದವನ್ನು ಮರೆತು ಒಟ್ಟಾಗಿ–ಒಂದು ಮುದ್ದೆಯಾಗಿನಿಂತ ಆ ಚಂದವನ್ನು ನೋಡಬೇಕು! ಈ ರೀತಿ ಜಾತಿಭೇದವೂ ಇಲ್ಲ; ವರ್ಣದ್ವೇಷವೂ ಇಲ್ಲ. ಬಿಳಿ ಕಪ್ಪು ಬೂದು ಕೆಂಪು ಹಸುರುಬಣ್ಣಗಳೆಲ್ಲಾ ಆ ಇಡ್ಲಿಯಲ್ಲಿಯೇ ಐಕ್ಯ! ಅದರ ಮೇಲೆ ಒಂದೊಂದು ಕೊಂಡೆ ಪಚ್ಚಕರಿ. ದಿವಂಗತ ಸರ್. ಜಗದೀಶಚಂದ್ರ ಬೋಸರ 'ಸಸ್ಯಗಳೂ ಪ್ರಾಣಿಗಳಷ್ಟೇ ಸುಖದುಃಖವನ್ನರಿತಿವೆ' ಎಂಬ ತತ್ವಕ್ಕನುಸಾರವಾಗಿ ರಚಿಸಲ್ಪಟ್ಟ ರಸಾಯನವೆಂದರೆ ಈವರೆಗೆ ಈ ಪಚ್ಚಕರಿಯೊಂದೇ! ಅರಿವೆ ಸೊಪ್ಪನ್ನೂ ಆ ಸೊಪ್ಪಿನಲ್ಲಿ ಹರಿದಾಡುವ ಪ್ರಾಣಿಗಳನ್ನೂ, ತೊಗರಿಯನ್ನೂ ಆ ತೊಗರಿಯೊಳಗಿನ ಕ್ರಿಮಿಕೀಟಗಳನ್ನೂ ಸಮಾನತೆಯಿಂದ ಕಂಡು, ಅವುಗಳಿಗೆಲ್ಲಾ ಜೀವವಿದೆಯೆಂಬುದರಿಂದ ಬೆಂಕಿಯ ಬಿಸಿ ಮಾತ್ರ ತಾಗಿಸಿ, ಈಗಿನ ಸುಧಾರಕರು ಅಸ್ಪೃಶ್ಯರನ್ನು ಮುಟ್ಟುವ ಮಾದರಿಯಲ್ಲಿ ನೆವಕ್ಕೆ ಮಾತ್ರ ಮುಟ್ಟಿದ ಉಪ್ಪು ಮೆಣಸುಗಳೊಡನೆ ತಯಾರಾದ ಕಷಾಯವದು! ರಾತ್ರಿಯ ಊಟಕ್ಕೆ ಸುಮಾರು ಅರ್ಧದಷ್ಟು ಸಣ್ಣದಾದ ಮುದ್ದೆ, ಅರೆವಾಸಿಯಷ್ಟು ಕಷಾಯ–ಇವು ಕೈದಿಗಳ ಆಹಾರ! ಅರಿವೆ ಸೊಪ್ಪು ಮತ್ತು ಇಡಿ ತೊಗರಿಯಲ್ಲದೆ ಜೈಲಿನ ಪಲ್ಯದ ಕತಾರ

ದೊಳಗೆ ಇತರ ಯಾವ ಜಾತಿಗಾದರೂ ಎಂದೆಂದಿಗೂ ಪ್ರವೇಶವಿಲ್ಲ. ಜೈಲಿನೊಳಗೆ ಹೊಕ್ಕವನು ಹೊರಬರುವ ವರೆಗೆ, ಅರಿವೆ ಸೊಪ್ಪು ತೊಗರಿಯನ್ನಲ್ಲದೆ ಇನ್ನಾವುದನ್ನೂ ಪಲ್ಯದ ರೂಪದಲ್ಲಿ ಕಾಣಲಾರನು. ಅವುಗಳಿಗಾಗುವ ಬೆರಕೆಯಲ್ಲಿ ಆಗಾಗ ವ್ಯತ್ಯಾಸಗಳಾಗುವದುಂಟು. ಒಂದು ದಿನ ಮಿಣಿಮಿಣಿ ಹುಳಗಳು ಮಿಣುಕುತ್ತಿದ್ದರೆ ಇನ್ನೊಂದು ದಿನ ರೆಕ್ಕೆಯ ಪತಂಗಗಳು ತೇಲುವದನ್ನೋ, ದಪ್ಪ ಕಾಲುಗಳ ಸೇರಂಟಿಗಳು ಮುರುಟಿಕೊಂಡಿರುವುದನ್ನೋ ಕಾಣಬಹುದು. ಕೈದಿಗಳ ದೇಹಪೋಷಣೆಗೆ ಅರಿವೆ ಸೊಪ್ಪು, ದಂಟು ಮತ್ತು ತೊಗರಿಯು ಉತ್ತಮವೆಂದು ಜೈಲು ಸಿದ್ಧಾಂತವೇ ಉಂಟಂತೆ. ಅದು ನಿಜವಿರಬಹುದು ಸಸ್ಯಾಹಾರಿಗಳೂ ಮಾಂಸಾಹಾರಿಗಳೂ ಇರುವ ಜೈಲಿನಲ್ಲಿ ಈ ರೀತಿ ಸಸ್ಯವೂ ಮಾಂಸವೂ ಇರುವ ಆಹಾರವಿದ್ದರೇನೆ ಎಲ್ಲರ ದೇಹದ ಪೋಷಣೆಯೂ ಏಕರೀತಿ ನಡೆದೀತೆನ್ನಿ! ಜೈಲು ಕಾನೂನಿನಂತೆ ಒಬ್ಬ ಕೈದಿಗೆ ಬೆಳಿಗ್ಗೆ ೬ ಔನ್ಸು ಗಂಜಿ, ಮಧ್ಯಾಹ್ನ ೧೨ ಔನ್ಸು ಅನ್ನ, ಸಾಯಂಕಾಲ ೮ ಔನ್ಸು ಅನ್ನವನ್ನು ಕೊಡಬೇಕು. ಜೈಲಧಿಕಾರಿಗಳು ಕೊಡುವ ಆಹಾರವನ್ನು ತೂಕ ಮಾಡಿದರೆ, ತೂಕ ಕಡಿಮೆ ನಿಂತೀತೆಂದು ನಾನು ಹೇಳಲಾರೆ. ಅವುಗಳಲ್ಲಿರುವ ಕಲ್ಲುಕಡ್ಡಿಗಳ ಭಾರವೆಲ್ಲಿ ಹೋದೀತು?

ಸರಿ. ಆಹಾರದಲ್ಲಿ ಕಾನೂನಿಗನುಸಾರವಾದ ತೂಕವನ್ನು ಕಲ್ಲುಕಡ್ಡಿಗಳು ಭರ್ತಿಮಾಡಬೇಕಾದರೆ ಆ ಆಹಾರದ ಮಿಕ್ಕ ಭಾಗವೇನಾಗುತ್ತದೆ, ಎಂಬ ಪ್ರಶ್ನೆ ಬರುವದಿಲ್ಲವೆ? ಹೌದು. ಕಾನೂನಿರುವಷ್ಟು ಆಹಾರ ಸಾಮಾಗ್ರಿಗಳ ಮೌಲ್ಯವು ಸರಕಾರದ ಹಣದಿಂದ ಜೈಲಧಿಕಾರಿಗಳಿಗೇನೊ ದೊರಕುತ್ತದೆ. ಆದರೆ ಅದನ್ನೆಲ್ಲಾ ಜೈಲಿನೊಳಗೆ ಚೆಲ್ಲುವಂತೆ ದಿನಂಪ್ರತಿ ಜೈಲಧಿಕಾರಿಗಳ ಕೈಗೆ ಬಂದು ಬಡಿಯುವ ಕಾನೂನೇನಾದರೂ ಉಂಟೇನು? ಇಲ್ಲ. ಕಾನೂನು ಸ್ವತಃ ಬಂದು ಏನನ್ನಾದರೂ ಮಾಡಲು ನಿಲ್ಲುವದಿಲ್ಲವೆನ್ನಿ. ಜೈಲಧಿಕಾರಿಗಳು ಕೆಲವಂಶವನ್ನು ಜೈಲಿನೊಳಗೆ ಕಳುಹಿಸುತ್ತಾರೆ; ಮಿಕ್ಕದನ್ನು ಜೇಬಿನೊಳಗೆ ಕಳುಹಿಸುತ್ತಾರೆ! 'ಜೈಲಿನೊಳಗಿದ್ದರೂ ಜೈಲಧಿಕಾರಿಗಳು ಜೈಲನ್ನವನ್ನು ನುಂಗುವದಿಲ್ಲವಲ್ಲಾ' ಎಂದು ನೀವು ಪಶ್ಚಾತ್ತಾಪ ಪಡುವದು ಬೇಡ!

**'ಫೈಲು'**

ಪ್ರತಿ ಸೋಮವಾರ 'ಫೈಲು' ಇದೆ. 'ಹಾಗಂದರೇನೆಂದು ಕೇಳುವಿರಾ? ಹೇಳುತ್ತೇನೆ. ನಾವು ಇತರ ದಿನಗಳಲ್ಲಿ ಮುಂಜಾನೆ ೫|| ಘಂಟೆಗೆ ಏಳುವುದಾದರೆ ಸೋಮವಾರ ೪|| ಘಂಟೆಗೆ ಎದ್ದು ನಿತ್ಯಾಹ್ನಿಕ ತೀರಿಸಿ, ಗಂಜಿ ಸುರಿದು, ನಮ್ಮ ತಟ್ಟೆ ಬಟ್ಟಲಾದಿ ಎಲ್ಲಾ ಸಾಮಾನುಗಳನ್ನು ಹಿಡಿದುಕೊಂಡು ಜೈಲಿನ ಒಳಾಂಗಣದಲ್ಲಿ ತಯಾರಾಗಿ ನಿಲ್ಲಬೇಕು. ಆ ಸಮಯದಲ್ಲಿ ಸಾಲಿನ ಮಟ್ಟವನ್ನು ಸರಿಮಾಡುವ ಜೈಲುವಾರ್ಡರರ ನೇರದೃಷ್ಟಿ ಅಥವಾ ದೂರದರ್ಶಿತ್ವವನ್ನು ನಿಜವಾಗಿಯೂ ಹೊಗಳಬೇಕು. ಒಂದೊಮ್ಮೆಗೆ ಈ ವಾರ್ಡರರ ಕೆಲಸಹೋಗಿ ಬಿಟ್ಟರೂ ಈ ನೇರ ದೃಷ್ಟಿಯ ದೆಸೆಯಿಂದಾಗಿ ಅವರು ನಿರುದ್ಯೋಗಿಗಳಾಗುವಂತಿಲ್ಲವೆನ್ನಬಹುದು. ಬೇರಾವುದೂ ದೊರೆಯದಿದ್ದಲ್ಲಿ ಪೇಟೆಗಳಲ್ಲಿ ಲೈನ್ ಲೈನ್ ಬಾಡಿಗೆ ಕಟ್ಟಡಗಳನ್ನು ಕಟ್ಟಿಸಿ ಹಾಕುವ ಮಹನೀಯರಾದರೂ ಲೈನ್ ನೋಡುವ ಕೆಲಸಕ್ಕಿವರನ್ನು ನೇಮಿಸಿಕೊಳ್ಳದಿರಲಾರರು. ಕೈದಿಗಳ ಸಾಲಿನ ಒಂದು ಕೊನೆಯ ಲ್ಲೊಬ್ಬ, ಇನ್ನೊಂದ ಬದಿಯಲ್ಲಿ ಮತ್ತೊಬ್ಬ ವಾರ್ಡರರು ನಿಂತು ಸಾಲಿನ ಕಾಲುಗಳನ್ನೊಮ್ಮೆ ನೋಡುವರು, ತಲೆಗಳನ್ನೊಮ್ಮೆ ನೋಡುವರು. ಸಾಲಿನಲ್ಲಿ ಗೂನುಬೆನ್ನಿನವರಿರಬಹುದು. ಸೊಟ್ಟ ಕಾಲಿನವರಿರಬಹುದು. ಜನ್ಮತಃ ಅವರು ಹೇಗಿದ್ದರೂ ಆ ಹೊತ್ತಿನಲ್ಲಿ ನೀಟಾ ನೀಟ ಮನುಷ್ಯರಾಗಬೇಕು; ನೆಟ್ಟಗೆ ನಿಂತುಕೊಳ್ಳಬೇಕು. ಅಷ್ಟು ಹೊತ್ತಿಗೆ ಜೈಲು ಸುಪರಿಂಟೆಂಡೆಂಟರ ಸವಾರಿ ಬರುವದು. ಅವರನ್ನನುಸರಿಸಿ ಜೈಲರರೂ

(೨೯ನೆ ಪುಟ ನೋಡಿರಿ.)

---

(೧೯ ನೆ ಪುಟದಿಂದ.)

ತತ್ವಗಳನ್ನು ಹೊಡೆದು ನೆಲಕ್ಕುರುಳಿಸಿ ಅದರ ಮೇಲೆ ಸೊಗಸಾದ ಗೋರಿಯನ್ನು ಕಟ್ಟಿ, ಐಕ್ಯದ ಗರಿಯನ್ನು ಗಾಳಿಯಲ್ಲಿ ತೂರಿಬಿಟ್ಟು, ಬಡೆದಾಡಿರಿ! ನಿಮ್ಮ ನಾಟಕವಾದೊಡನೆ ಹೊಸ ನಟರು ರಂಗಭೂಮಿಯನ್ನು ಪ್ರವೇಶಿಸಲಿ. ಹೊಡೆದಾಡುವುದೇ ನವಭಾರತದ ನವನೀತಿಯೆಂಬುದನ್ನು ಕಾರ್ಯತಃ ತೋರಿಸಿರಿ. ಇದೋ, ದೂರದಿಂದೊಂದು ನಮಸ್ಕಾರವನ್ನು ಸ್ವೀಕರಿಸಿರಿ.

ಇತಿ ನಿಮ್ಮ

ಭಗದತ್ತ.

# ಅಂತರಂಗ

**ಆದಿತ್ಯವಾರ, ದಶಂಬರ ೧೮, ೧೯೩೮**

## ಇನ್ನೂ ತಾಟಸ್ಥ್ಯವೇಕೆ?

ಭಾರತೀಯ ಸಂಸ್ಥಾನಗಳ ಚಟುವಟಿಕೆಗಳಲ್ಲಿ ಕಾಂಗ್ರೆಸ್ ಪ್ರತ್ಯಕ್ಷವಾಗಿ ಕೈಹಾಕಬಾರದೆಂಬ ಹರಿಪುರದ ನಿರ್ಣಯವು ಈಗಾಗಲೆ ಹೂಬಿಟ್ಟಿದೆ. ಸಂಸ್ಥಾನಗಳ ನರೇಂದ್ರರು ಜವಾಬ್ದಾರೀ ಸರಕಾರವನ್ನು ಸ್ಥಾಪಿಸದಿರುವುದಕ್ಕಾಗಿ ಹೈದರಾಬಾದ್, ರಾಜಕೋಟೆ, ಧೇನ್ಕನಾಲ್ ಮೊದಲಾದ ಸಂಸ್ಥಾನಗಳಲ್ಲಿ ಪ್ರಜೆಗಳು ಚಳವಳವನ್ನು ಪ್ರಾರಂಭಿಸಿರುವುದನ್ನು ನೋಡುವಾಗ ಹರಿಪುರದ ನಿರ್ಣಯದಿಂದಾಗಿ ಸಂಸ್ಥಾನದ ಪ್ರಜೆಗಳಲ್ಲಿ ರಾಜಕೀಯ ಜಾಗೃತಿಯು ಪೂರ್ಣವಾಗಿ ತಲೆದೋರಿದೆಯೆಂದೂ, ಕಾಂಗ್ರೆಸಿನ ಶಕ್ತಿಯು ಮೊದಲಿನಿಂದ ಹೆಚ್ಚಿರುವುದರಿಂದ ಅದು ತನ್ನ ತಾಟಸ್ಥ್ಯಧೋರಣೆಯನ್ನು ಬಿಟ್ಟು, ವಿಶಾಲ ಭಾರತದ ರಾಜಕೀಯ ಸಂಗ್ರಾಮದ ಧುರೀಣತೆಯನ್ನು ವಹಿಸುವ ಕಾಲವು ಬಂದೊದಗಿದೆಯೆಂದೂ ಸ್ಪಷ್ಟವಾಗುತ್ತದೆ. ಕಾಂಗ್ರೆಸಿನ ದೃಷ್ಟಿಯಲ್ಲಿ ಬ್ರಿಟಿಷ್ ಭಾರತ, ನರೇಂದ್ರ ಭಾರತವೆಂಬೀ ವ್ಯತ್ಯಾಸಗಳಿಲ್ಲ. ಭಾರತೀಯ ಸಂಸ್ಥಾನಗಳಲ್ಲಿ ಈಗ ನಡೆಯುತ್ತಿರುವ ದಬ್ಬಾಳಿಕೆಗಳನ್ನು ಕಣ್ಣಾರೆ ಕಂಡು ಕಾಂಗ್ರೆಸು ಇನ್ನೂ ತಾಟಸ್ಥ್ಯಧೋರಣೆಯನ್ನು ಅನುಸರಿಸುವುದರಲ್ಲಿ ಅರ್ಥವಿಲ್ಲ. ನರೇಂದ್ರರು ಭಾರತೀಯರಿಗೆ ಬೆಂಬಲವೀಯುವ ಬದಲು ರಾಷ್ಟ್ರದ ಸ್ವಾತಂತ್ರ್ಯ ಚಳವಳವನ್ನು ನಾಶಗೊಳಿಸುವ ವಿದೇಶೀ ಶಕ್ತಿಗೆ ಸಹಾಯಮಾಡುತ್ತಿರುವುದನ್ನು ಕಾಣುವಾಗ ಅವರಿಂದ ರಾಷ್ಟ್ರೀಯ ಚಳವಳಕ್ಕೆ ಪ್ರಯೋಜನವು ಸರ್ವಥಾ ಸಿಗಲಾರದೆಂಬುದು ಸ್ವಯಂವ್ಯಕ್ತ. ಮಹಾತ್ಮಾಜಿಯವರಂದಿರುವಂತೆ ನರೇಂದ್ರರು ರಾಷ್ಟ್ರದ ಜನಹಿತಕಾರೀ ಪ್ರಬಲ ಸಂಸ್ಥೆಯೊಡನೆ ಸಹಕರಿಸದಿದ್ದರೆ ಅವರನ್ನು ಸ್ವಾತಂತ್ರ್ಯಸಮರದ ವೈರಿಗಳಸಾಲಿಗೆ ನಿಶ್ಚಯವಾಗಿಯೂ ಸೇರಿಸಬೇಕಾಗಿದೆ. ಸಂಸ್ಥಾನಗಳ ಚಳವಳಿಗಳ ಪರಿಸ್ಥಿತಿಯು ಹೀಗಿರುವಾಗ ಕಾಂಗ್ರೆಸು ತನ್ನ ತಾಟಸ್ಥ್ಯಧೋರಣೆಯನ್ನು ಆದಷ್ಟು ಬೇಗನೆ ಬದಲಾಯಿಸಿ ಸಂಸ್ಥಾನಗಳ ಚಟುವಟಿಕೆಗಳಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುವುದು ಅತ್ಯವಶ್ಯವಾಗಿದೆ.

## ಹನಿಗಳು

ಪಂಜಾಬಿನ ಪ್ರಧಾನರಾದ ಸರ್ ಸಿಕಂದರ್ ಹಯಾತ್ ಖಾನರು ತಮ್ಮ ಪ್ರಾಂತ್ಯದವರೇ ಸೈನ್ಯಕ್ಕೆ ಯೋಗ್ಯರಾದವರೆಂದು ಒತ್ತಿಯೊತ್ತಿ ಹೇಳಿದ್ದಾರೆ. 'ನಮ್ಮ ರಕ್ತದ ಬಲದಿಂದಲೇ ನಾವೀ ಪರಿಸ್ಥಿತಿಗೆ ಬಂದಿದ್ದೇವೆ. ಅದೇ ರಕ್ತದಿಂದಲೇ ನಾವದನ್ನು ರಕ್ಷಿಸಲಿದ್ದೇವೆ' ಎಂದವರ ಹೆಮ್ಮೆಯ ಹೇಳಿಕೆ.

ಪ್ರಾಯಶಃ ಬ್ರಿಟಿಷರು ಹೇಳಿದಂತೆ ಕುಣಿಯುವುದರಲ್ಲಿ ಸರ್ ಸಿಕಂದರ್ ಮತ್ತು ಕಂಪೆನಿಯವರಂತೆ ಸಮಗ್ರ ಭಾರತದಲ್ಲಿ ಇತರರು ಸಿಗುವುದು ದುರ್ಲಭವೆಂದೇ ಅವರಿಗೆ ಸೈನ್ಯದಲ್ಲಿ ಹೆಚ್ಚಿನ ಸ್ಥಾನಗಳನ್ನು ಕೊಟ್ಟರಬೇಕು.

೦೦೦

ಹೈದರಾಬಾದಿನಲ್ಲಿ ಬ್ರಿಟಿಷರೇ ಜಾತೀಯ ಜಗಳಗಳ ಬೀಜ ಬಿತ್ತಿದ್ದಾರೆ. ಅಲ್ಲಿಯ ನಿಜಾಮರು ಬ್ರಿಟಿಷರ ಕೈಗೊಂಬೆಯಂತಿದ್ದಾರೆ. ಅವರ ಪ್ರಜೆಗಳಿಗೆ ಜವಾಬ್ದಾರೀ ಸರಕಾರವನ್ನು ಕೊಡಲು ರಾಜರಿಗೆ ಮನಸ್ಸಿದೆಯೆಂದು ಡಾ| ಜಯಸೂರ್ಯರ ಹೇಳಿಕೆ.

ಇದರಲ್ಲಿ ತಪ್ಪೇನು? ಇಂತಹ ನರೇಂದ್ರರಿದ್ದರಲ್ಲವೆ ಫೆಡರೇಶನನ್ನು ಸುಲಭವಾಗಿ ಜಾರಿಗೆ ತರಲು ಬ್ರಿಟಿಷರಿಗೆ ಸಾಧ್ಯ? 'ದಯಾಳು ಬ್ರಿಟಿಷ ಸರಕಾರವು ಭಾರತದಲ್ಲಿ ಜಾತೀಯ ಜಗಳಗಳನ್ನು ಮಾಡಿಸದಿದ್ದರೆ ಅವರ ಗತಿಯೇನು? ನಮ್ಮೊಳಗೆ ಜಗಳವಿದ್ದರೇನೆ ಅವರಿಗೆ ಸುಖ ಪ್ರಾಪ್ತಿ.

## ಸ್ವೀಕಾರ

ಉಡುಪಿಯ **ಜೆನರಲ್ ಮ್ಯೂಚುವಲ್ ಎಶ್ಯೂರೆನ್ಸ್ ಕಂಪೆನಿ, ಲಿಮಿಟೆಡ್**—ಇದರ ಮೂರನೆಯ ವಾರ್ಷಿಕ ವರದಿಯು ನಮ್ಮ ಕೈ ಸೇರಿದೆ. ಇದರ ವಿಮರ್ಶೆಯು ಮುಂದಿನ ಸಂಚಿಕೆಯಲ್ಲಿ ಪ್ರಕಟವಾಗಲಿದೆ.

# ಆರನೆಯ ಜಾ

## ಸಾಮ್ರಾಜ್ಯದ ಚಕ್ರವ

## ಬ್ರಿಟಿಷ್



ಆರನೆಯ ಜಾರ್ಜರೂ ಅವರ ರಾಜ್ಞಿ ಎಲಿಜಬೆತ್ ರವರೂ ತಮ್ಮ ಮಕ್ಕಳೊಂದಿಗೆ ವಿಂಡ್ಸರ್ ಅರಮನೆಯ ಬಳಿಯಲ್ಲಿ ಸುತ್ತುಮುತ್ತಲಿನ ದೃಶ್ಯ ನೋಡುತ್ತಿದ್ದಾರೆ.

'ದೊಡ್ಡ ರಾಜನಂತೆ ಸುಮ್ಮಗೆ ಕುಳಿತಿದ್ದಾನೆ'—ಎಂಬುದೊಂದು ನಾಣ್ಣುಡಿ. ಆದರೆ ರಾಜರು ನಿಜವಾಗಿಯೂ ಸುಮ್ಮನಿರುತ್ತಾರೆಯೆ? ಬ್ರಿಟಿಷ್ ಸಾಮ್ರಾಜ್ಯದ ಚಕ್ರವರ್ತಿಗಳಾದ ಆರನೆಯ ಜಾರ್ಜರು ಒಂದು ದಿನದಲ್ಲಿ ಎಷ್ಟು ಕೆಲಸ ಮಾಡುತ್ತಾರೆಂಬುದು ನಿಮಗರಿತಿದೆಯೆ? ಪ್ರಜಾಸತ್ತೆಯ ಈ ಕಾಲದಲ್ಲಿ ರಾಜರು ಕೇವಲ 'ಸಹಿ ಹಾಕುವ ಯಂತ್ರ' ವೆಂದು ನೀವು ಭಾವಿಸಿರಬಹುದು. ಇದರ ಸತ್ಯಾಸತ್ಯತೆಯನ್ನು ತಿಳಿಯೋಣ.

೦೦

ಎಂಟನೆಯ ಎಡ್ವರ್ಡರು ಸಿಂಹಾಸನತ್ಯಾಗ ಮಾಡಿದಾಗ ರಾಜಮನೆತನವು ಅಳಿದು ಹೋಗುವುದೆಂದು ಹೆಚ್ಚಿನವರು ಭಾವಿಸಿದರು. ಸಿಂಹಾಸನ ತ್ಯಾಗದ ಆ ಗೊಂದಲದ ವಾರವು ಸಂದು ಹೋಗಿ ಇಂದಿಗೆ ೨೫ ತಿಂಗಳುಗಳಾದುವು. ಬ್ರಿಟಿಷ್ ಸಾಮ್ರಾಜ್ಯದ' ಸಿಂಹಾಸನವನ್ನು ಅವರ ಸಹೋದರರಾದ ಆರನೆಯ ಜಾರ್ಜರು ಈಗ ಅಲಂಕರಿಸುತ್ತಿದ್ದಾರೆ. ರಾಣಿ ಎಲಿಜಬೆತ್ ಅವರ ಪಟ್ಟದರಸಿಯಾಗಿದ್ದಾರೆ. ಆರನೆ ಜಾರ್ಜರು ಎಂಟನೆಯ ಎಡ್ವರ್ಡರಷ್ಟು ಚತುರರಲ್ಲವೆಂಬ ಅಭಿಪ್ರಾಯವು ಹೆಚ್ಚಿನವರಲ್ಲಿ ಬೇರೂರಿತ್ತು. ಇದನ್ನು ಆಧಾರ ರಹಿತವಾದುದೆಂದು ಹೇಳಲಾಗುವುದಿಲ್ಲ. ಎಂಟನೆಯ ಎಡ್ವರ್ಡರು ತುಂಬಾ ಧೈರ್ಯಶಾಲಿಗಳು. ಸ್ವತಂತ್ರ ಮನೋವೃತ್ತಿಯವರು. ತನ್ನ ಇಚ್ಛೆಯನ್ನು ಪೂರೈಸಿಕೊಳ್ಳುವುದಕ್ಕಾಗಿ ಅವರು ಜಗತ್ತಿನ ಅತಿ ದೊಡ್ಡ ಸಾಮ್ರಾಜ್ಯದ ಒಡೆತನವನ್ನು ಬಿಟ್ಟು ಕೊಟ್ಟಿರುವುದೇ ಅದಕ್ಕೆ ಒಂದು ನಿದರ್ಶನವಾಗಿದೆ. ಆದರೆ ಆರನೆಯ ಜಾರ್ಜರು ಕರ್ತವ್ಯ ನಿಷ್ಠರು. ತನ್ನ ತಂದೆಯಾದ ಐದನೆ ಜಾರ್ಜರಂತೆಯೇ ದೃಢ ಮನಸ್ಕರು-ಎಂದು ಇಂಗ್ಲಿಷ್ ಜನತೆಯು ಅಭಿಪ್ರಾಯ ಪಡುತ್ತಿದೆ

೦೦

'ಪ್ರೀತಿಸುವ ಮಡದಿಯ ಬೆಂಬಲವಿಲ್ಲದಿದ್ದರೆ ನನಗೆ ಜವಾಬ್ದಾರಿಯನ್ನು ಹೊರುವುದು ಶಕ್ಯವಲ್ಲ' ಎಂದು ಎಂಟನೆಯ ಎಡ್ವರ್ಡರು ಸಿಂಹಾಸನ ತ್ಯಾಗದ ಕಾಲದಲ್ಲಿ ಹೇಳಿರುವುದರಲ್ಲಿ ತುಂಬಾ ಅರ್ಥವಿದೆ. ಜಾರ್ಜರು ಆ ಬೆಂಬಲವನ್ನು ಪಡೆದೇ ಈಗ ತನ್ನ ಜವಾಬ್ದಾರಿಯನ್ನು ದಕ್ಷತೆಯಿಂದ ಪೂರೈಸುತ್ತಿದ್ದಾರೆ. ಅವರ ಕೌಟುಂಬಿಕ ಜೀವನವು ಬಹಳ ಆನಂದಮಯವಾಗಿದೆಯೆಂದು ವಿಂಡ್ಸರ್ ಡ್ಯೂಕರು ಮೊದಲೇ ಹೇಳಿದ್ದಾರೆ.

೦೦

ರಾಜರು ಮಾಡುವ ಕೆಲಸದ ಸ್ವಭಾವವಾವುದು? ರಾಜ್ಯಾಡಳಿತಕ್ಕೆ ಅಷ್ಟು ದೊಡ್ಡ ಮಂತ್ರಿಮಂಡಲವಿದೆ. ಪ್ರಧಾನ ಮಂತ್ರಿ ಚೇಂಬರ್ಲೆನರು, ವಿದೇಶಮಂತ್ರಿ ಹೆಲಿಫ್ಯಾಕ್ಸರು, ವಸಾಹತುಗಳ ಮಂತ್ರಿ ಮೆಕ್ಡೊನಾಲ್ಡ್, ಯುದ್ಧ ಮಂತ್ರಿ ಹೋರ್ ಬೆಲೀಷ್ ಇವರೇ ಮೊದ

ಲಾದವರು
ಬ್ದಾರಿಯ
ರಿಗಿರುವ
ಬಹಳ
'ಮಂತ್ರಿಗ

ಸ್ವ



ಆಟ

ದರು' ಎಂ
ಆಗಾಗ
ದುಂಟು.
ರಾಗಿದ್ದರೆ
ಕಾಣಬೇ

ಎಲ್ಲಾ ಪತ್ರ
ವ್ಯವಹಾ

# ಅಮೇರಿಕಕ್ಕೆ ತೆರಳುವುದೇಕೆ?

## 'ಸಹಿ-ಯಂತ್ರ'!

ಸ್ಯ.

ಅವರೆಡೆಗೆ ಹೋಗುತ್ತವೆ. ಉಕ್ಕಿನ ಚಿಕ್ಕದೊಂದು ಪೆಟ್ಟಿಗೆ. ಅದರ ಹೊರಗಡೆಯಲ್ಲಿ 'The King' ಎಂದಿಷ್ಟೇ ಬರೆಯಲಾಗಿದೆ. ರಾಜರು ಎಲ್ಲಾ ಪ್ರಾಮುಖ್ಯ ಪತ್ರಗಳನ್ನು ಸಾವಧಾನವಾಗಿ ಓದುತ್ತಾರೆ. ತನಗೆ ಮೆಚ್ಚದ ಕೆಲವು ವಿಚಾರಗಳಿದ್ದರೆ, ಅವುಗಳ ವಿವರಣೆಯನ್ನು ಕೇಳುವುದಕ್ಕಾಗಿ ಮಂತ್ರಿಗಳನ್ನು ಕರೆಯುತ್ತಾರೆ. ಮಂತ್ರಿಗಳು ಮಂದಿಸುವುದೊಂದಲ್ಲದೆ ಬೇರಾವ ಗೌರವವನ್ನೂ ಅಲ್ಲಿ ಸೂಚಿಸುವುದಿಲ್ಲ. ರಾಜರು ತನಗರಿಯದ ವಿಚಾರಗಳನ್ನು ಮಂತ್ರಿಗಳೊಡನೆ ಕೇಳಿ ಆ ಕುರಿತು ಅಪರೂಪವಾಗಿ ಕೆಲವೊಮ್ಮೆ ಚರ್ಚಿಸುವುದುಂಟು. ಆದರೆ ಈ ಚರ್ಚೆಯಿಂದ ಹೆಚ್ಚಿನ ಪ್ರಯೋಜನವಿಲ್ಲ. ಕಾರಣ--ಘಟನಾತ್ಮಕವಾಗಿ ಮಂತ್ರಿಮಂಡಲವು ಮಾಡುವ ಯಾವುದಾದರೊಂದು ನಿರ್ಣಯವನ್ನು ಅಲ್ಲಗಳೆಯುವ ಹಕ್ಕು ರಾಜರಿಗಿರುವುದಿಲ್ಲ. ಆದರೆ ಅವರ ಸೂಚನೆಗಳನ್ನು ಮಂತ್ರಿಮಂಡಲವು ಕೆಲವೊಮ್ಮೆ ಮನ್ನಿಸುವುದುಂಟು.

oo

ರಾಜರ ಪ್ರಾಮುಖ್ಯವಾದೊಂದು ಕೆಲಸವೆಂದರೆ ಸಹಿಹಾಕುವುದು. ಆದಕ್ಕಾಗಿಯೇ ರಾಜರನ್ನು "ಸಹಿ ಮಾಡುವ ಯಂತ್ರ"ವೆಂದು ವ್ಯಂಗ್ಯವಾಗಿ ಕರೆಯುವುದು. ಈ ಕೆಲಸವು ಸುಲಭವಾದುದೆಂದು ಭಾವಿಸಬೇಡಿ. ಪ್ರತಿದಿನ ನೂರಾರು ಪತ್ರಗಳಿಗೆ ತನ್ನ ಸಹಿಯನ್ನು ಹಾಕುವುದು ಬಹಳ ಬೇಸರದ ಕೆಲಸ. ನಮ್ಮ ಹೆಸರನ್ನು ಜಾಗ್ರತೆಯಾಗಿ ನೂರಾರುಬಾರಿ ಬರೆಯುವುದೆಂದರೆ ನಮಗೆ ಬೇಸರವೆನಿಸುವುದಿಲ್ಲವೆ? ಅದು ಹೇಗಿದ್ದರೂ- ಬ್ರಿಟಿಷ್ ರಾಜರು "ಯಾವ ಸ್ವಾರ್ಥಾಭಿಲಾಷೆಯೂ ಇಲ್ಲದ ಸಹಾಯಕ"ನಂತೆ ಕೆಲಸಮಾಡುತ್ತಿದ್ದಾರೆ. ಯಾವ ಪಕ್ಷವೇ ಅಧಿಕಾರಕ್ಕೆ ಬರಲಿ. ಅವರು ಅದನ್ನು ಮೆಚ್ಚುತ್ತಾರೆ. ತನಗೆ ಸಾಧ್ಯವಿರುವ ಬೆಂಬಲವನ್ನೀಯುತ್ತಾರೆ.

oo

ಬ್ರಿಟಿಷ್, ರಾಜರು ಇದಕ್ಕಿಂತ ಹೆಚ್ಚಿನ ಕೆಲಸವನ್ನು ಮಾಡುವುದಿಲ್ಲ. ಪರದೇಶಗಳನ್ನು ಸಂಚರಿಸಿ ಅಲ್ಲಿಯ ಆತಿಥ್ಯವನ್ನು ಪಡೆದು ಆ ದೇಶಕ್ಕೂ ಇಂಗ್ಲೆಂಡಿಗೂ ಮಿತ್ರಭಾವವಿದೆಯೆಂಬುದನ್ನು ತೋರಿಸುವುದುಇವರದೊಂದು ವೈಶಿಷ್ಟ್ಯ. ಆರನೆ ಜಾರ್ಜರು ಇತ್ತೀಚೆಗೆ



ಮೂವರು ಬ್ರಿಟಿಷ್ ರಾಜರು

ಸಪತ್ನೀಕರಾಗಿ ಫ್ರಾನ್ಸಿಗೆ ತೆರಳಿರವ ಸಂಗತಿಯು ಪ್ರತಿಯೊಬ್ಬ

ರಿಗೂ ತಿಳಿದಿದೆ. ಸದ್ಯದಲ್ಲಿಯೆ ಅವರು ಅಮೇರಿಕಕ್ಕೆ ತೆರಳುವರೆಂದೂ ತಿಳಿಯಲಾಗಿದೆ. ಯುನೈಟೆಡ್ ಸ್ಟೇಟ್ಸ್‌ನ ಅಧ್ಯಕ್ಷರಾದ ಫ್ರಾಂಕ್ಲಿನ್ ರೂಸ್‌ವೆಲ್ಟರು ರಾಜಕುಟುಂಬಕ್ಕೆ ಮಹತ್ವದ ಸ್ವಾಗತವನ್ನು ಈಗಾಗಲೆ ಕೊಟ್ಟಿದ್ದಾರೆ.

೦೦

ಆರನೆಯ ಜಾರ್ಜರ ಈ ಸಂದರ್ಶನೆಯು ವೈಯಕ್ತಿಕವಾದುದೆಂದು ಈಗ ಹೇಳಲ್ಪಟ್ಟರೂ ಇದಕ್ಕೆ ರಾಜಕೀಯ ಕಾರಣಗಳಿವೆಯೆಂದು ಊಹಿಸಲಾಗಿದೆ. ರಾಜರೊಡನೆ ಪ್ರಧಾನಮಂತ್ರಿ ಚೇಂಬರ್ಲೆನರೂ ತೆರಳುವರು. "ನ್ಯೂಯಾರ್ಕ್ ಟೈಮ್ಸ್" ಪತ್ರಿಕೆಯಲ್ಲಿ ಪ್ರಕಟವಾಗಿರುವಂತೆ ಇಂಗ್ಲೆಂಡ್ ಮತ್ತು ಅಮೇರಿಕಗಳೊಳಗೆ ಪರಸ್ಪರ ಐಕ್ಯವನ್ನು ಬೆಳೆಸುವುದೇ ಈ ಸಂದರ್ಶನೆಯ ಧ್ಯೇಯವೆಂದು ಅಮೇರಿಕನರ ಅಭಿಪ್ರಾಯವಾಗಿದೆ. ಆದರೆ ಚೇಂಬರ್ಲೆನರು ಏಕಸತ್ತಾ ರಾಷ್ಟ್ರಗಳೊಂದಿಗೆ ಮೈತ್ರಿಯನ್ನು ಬೆಳೆಸಿರುವುದರಿಂದ ಸಂದರ್ಶನೆಯ ಧ್ಯೇಯವು ಹಾಗಿರಲಿಕ್ಕಿಲ್ಲವೆಂದು ಅಮೇರಿಕದ ಸಿನೇಟರ್ ಬೋರಾರವರು ಅಭಿಪ್ರಾಯಪಟ್ಟಿದ್ದಾರೆ. ಆರನೆಯ ಜಾರ್ಜರು ಕೆನಡದ ಎಲ್ಲಾ ಪ್ರಾಂತ್ಯಗಳಲ್ಲಿ ಸಂಚರಿಸುವರೆಂದು ಅಲ್ಲಿಯ ಪ್ರಧಾನಮಂತ್ರಿ ಮಿ| ಮೆಕೇಂಜಿ ಕಿಂಗ್‌ರವರು ಈಗಾಗಲೆ ಪ್ರಕಟಿಸಿದ್ದಾರೆ. ಇಂಗ್ಲೆಂಡಿನ ಟೈಮ್ಸ್ ಪತ್ರಿಕೆಯು ಬರೆದಿರುವಂತೆ- "ಈ ಸಂದರ್ಶನದಿಂದಾಗಿ ಆಂಗ್ಲೋ-ಅಮೇರಿಕನ್ ಸಂಬಂಧವು ಸುಧಾರಿಸಲ್ಪಡುವುದೆಂದು ಭಾವಿಸಲಾಗಿದೆ." ಸುಮಾರು ಮೇ ತಿಂಗಳಲ್ಲಿ ಬ್ರಿಟನಿನ ರಾಜದಂಪತಿಗಳು ಅಮೇರಿಕಕ್ಕೆ ತೆರಳುವರು.

೦೦

ಆರನೆಯ ಜಾರ್ಜರು ಭಾರತಕ್ಕೆ ಬರುವ ಕುರಿತು ಹಲವು ವಾರ್ತೆಗಳು



ಈಗಿನ ರಾಜರ ತಂದೆ ಐದನೆ ಜಾರ್ಜರು. ಇವರ ಹೆಚ್ಚಿನ ಗುಣಗಳು ಆರನೆ ಜಾರ್ಜರಲ್ಲಿವೆ ಎಂದು ಬ್ರಿಟಿಷರ ಅಭಿಮತವಂತೆ.

ಈಗಾಗಲೆ ಪ್ರಕಟವಾಗಿವೆ. ಆಳರಸರ ವಿಧಾನಗಳಲ್ಲಿ ಭಾರತೀಯರಿಗೆ ಸಮಾಧಾನವಿಲ್ಲದಿರುವುದರಿಂದ ಫೆಡರೇಶನ್ ಜಾರಿಗೆ ಬಂದನಂತರ ಜಾರ್ಜರು ಬರುವರೆಂದು ಊಹಿಸಲಾಗಿದೆ. ಮೊನ್ನೆ ನಡೆದ ಢಿಲ್ಲಿ ದರ್ಬಾರಿನ ಕಾಲದಲ್ಲಿ ಅವರು ಬರುವರೆಂಬ ವದಂತಿಯಿದ್ದರೂ ಈಗಿನ ರಾಜಕೀಯ ಪರಿಸ್ಥಿತಿಯಿಂದಾಗಿ ಆ ಯೋಚನೆಯು ಕಾರ್ಯರೂಪಕ್ಕೆ ತರಲ್ಪಡಲಿಲ್ಲವೆಂದು ಆಂಗ್ಲ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ರಾಜರ ಭಾರತ ಸಂಚಾರವು ಗಣಪತಿಯ ವಿವಾಹದಂತಾಗುವುದೆ?

---

[೩೦ನೆ ಪುಟದಿಂದ]

ಮೂರು ನಾಲ್ಕು ಬೊಕ್ಕೆಗಳೆದ್ದಿವೆ. ಆದರೆ ಮಾಡುವದೇನು? 'ಇದು ನನ್ನ ಕೈ' ಎಂಬ ಭಾವನೆಯನ್ನು ಬಿಟ್ಟು ಆ ಕಲ್ಲಿಗಾಗಿ ಇರುವ ಕಲ್ಲೆಂದು ನೆನಸಿಕೊಂಡು ಹೇಗೋ-ಹೇಗೆಂದು ನನಗೇ ಗೊತ್ತಿಲ್ಲ- ಒಡೆಯುತ್ತಾ ಬಂದೆ. ಒಟ್ಟಿನ ಮೇಲೆ ಅಂದಿನ ಸೂರ್ಯೋದಯವೇ ನನ್ನ ಮಟ್ಟಿಗೆ ಕೆಟ್ಟ ಘಳಿಗೆಯಲ್ಲಾಯಿತೆಂದು ತೋರುತ್ತದೆ. ಮಧ್ಯಾಹ್ನ ಊಟದ ಹೊತ್ತಿಗೆ ಒಂದು ರಾಗಿಯ ಮುದ್ದೆ ಬಂದು ಬಟ್ಟಲಿಗೆ ಬಿತ್ತು.

**ಮುಂದೇನಾಯಿತು? ವೆಲ್ಲೂರು ಜೈಲಿನೊಳಗೆ ಎಂಥೆಂಥಾ ಜನರಿದ್ದರು? ಜೈಲಿನೊಳಗಿದ್ದರೂ ಕೈಗೆ ಬೀಡಿ, ಬಾಯಿಗೆ ಬೀಡಿ, ಆಗಾಗ ದೊರಕುವುದುಂಟು- ಅದು ಹೇಗೆ? ಸತ್ಯಾಗ್ರಹೀ ಕೈದಿಗಳು ಹೇಗಿದ್ದರು? ವೆ ದ ಲಾದವುಗಳ ಕುರಿತು ಬರುವ ವಾರದ ಸಂಚಿಕೆಯಲ್ಲಿ ತಿಳಿಸುವೆನು.**

(೨೪ನೆ ಪುಟದಿಂದ.)

ಹಿಂದಿನಿಂದಲೇ ಇರುವರು. ಸುಪರಿಂಟೆಂಡರು ಸಾಲನ್ನು ನೋಡುತ್ತಾ ಹೋಗುವರು. ಅವರು ಹತ್ತಿರ ಬರುವ ವರೆಗೂ ಕಾರ್ಕಳ ಗೋಮಟರಾಯನ ಭಂಗಿಯಲ್ಲಿ ಎರಡೂ ಕೈಗಳನ್ನು ಇಳಿಯಲಿಟ್ಟು ನೇರಾಗಿ ನಿಂತಿರತಕ್ಕದ್ದು. ಧೊರೆಯ ದೃಷ್ಟಿ ತನ್ನ ಕಡೆಗೆ ಬಿದ್ದಾಗ, ಏನಾದರೂ ಪ್ರಾರ್ಥಿಸಿಕೊಳ್ಳಲಿಕ್ಕಿದ್ದರೆ ಬಲಗೈಯ್ಯ ನಡುಗಂಟಿನ ಕೆಳಾರ್ಧವನ್ನು ಮುಂದಕ್ಕೆ ಚಾಚಿದರೆ ಸರಿ. 'ಸ್ವಾಮಿಾ' 'ತಯ್ಯಾ' ಮುಂತಾದ ನಾಲಿಗೆಯ ವಹಿವಾಟು ಕೂಡದು. ಹೀಗೆ ಕೈಮುಂದೆ ಬಂದೊಡನೆ ಸುಪರಿಂಟೆಂಡೆಂಟರು ಒಂದು ಮಿನಿಟು ನಿಲ್ಲುವರು. ನಿಮಗೆ ಊರಿಗೆ ಪತ್ರ ಬರೆಯಲು ಕಾರ್ಡು ಬೇಕೋ, ಅನ್ನದಿಟ್ಲಿಯ ಬದಲು ರಾಗಿ ಮುದ್ದೆ ಕೊಡಬೇಕೊ, ಸಿಪ್ಪೆ ಗುದ್ದುವದು ಸಾಕಾಗಿ ತೋಟದ ಕೆಲಸ ಬೇಕೋ- ಇಂತಹದೇನಾದರೂ ಆಗಬೇಕಾಗಿದ್ದರೆ ಆ ಸಮಯದಲ್ಲಿ ಹೇಳಬೇಕು. ಅಗತ್ಯವುಳ್ಳ ಪ್ರಶ್ನೆ ಹಾಕಿ ವಿಚಾರಿಸಿ ಸುಪರಿಂಟೆಂಡೆಂಟರು ಮುಂದಡಿಯಿಡುವರು. ಹೀಗೆ ಪ್ರತಿ ಸೋಮವಾರವೂ ನಡೆಯುವದು. ಈ 'ಫೈಲು' ಮುಗಿದ ಮೇಲೆ ನಿತ್ಯದ ಕೆಲಸಕ್ಕೆ ಹೋದರಾಯಿತು. ನಾವು ಫೈಲಿನಲ್ಲಿ ಬೇಡಿದವುಗಳ ಪೈಕಿ ಜೈಲು ಪದ್ಧತಿಗನುಸಾರವಾದ ಕೆಲವಾದರೂ ದೊರೆಯುವವು. ಕನ್ನಾನೂರಿನಲ್ಲ ಒಂದು ಫೈಲಿನಲ್ಲಿ ಒಬ್ಬ ಕೈದಿ ಒಂದು ಕಾರ್ಡು ಬೇಕೆಂದು ಕೇಳಿದ್ದ. ಅವನಿಗದು ದೊರೆಯಿತು. ಮರು ಫೈಲಿನ ದಿನವೂ ಸುಪರಿಂಟೆಂಡೆಂಟರನ್ನು ಅವನ ಕೈ ತಡೆಯಿತು. 'ಏನು' ಎಂದರು ದೊರೆ. 'ನನಗೊಂದು ಕಾರ್ಡು ಬೇಕು ಸ್ವಾಮಿಾ' ಎಂದ. ಸುಪರಿಂಟೆಂಡೆಂಟರ ಹಿಂದೆಯೇ ಇದ್ದ ಜೈಲರರು 'ಹ್ನೀ. ನೀನು ಹೋದ ಫೈಲಿನಲ್ಲಿ ಕಾರ್ಡು ಕೇಳಿದ್ದಿ- ಕೊಟ್ಟದೆ. ಪುನಃ ಕಾರ್ಡು?' ಎಂದರು. ಕೈದಿ ಸುಪರಿಂಟೆಂಡೆಂಟರೊಡನೆ ಹೇಳಿದ 'ಅವು ಹೌದು ಸ್ವಾಮಿಾ. ಆ ಕಾರ್ಡಿಗೆ ಊರಿಂದ ಉತ್ತರವೇ ಬರಲಿಲ್ಲ. ಆದ್ದರಿಂದ ಇನ್ನೊಂದು ಬರೆಯಬೇಕಾಯಿತು" ಎಂದ. "ಇಷ್ಟು ಬೇಗನೆ ಇನ್ನೊಂದು ದೊರೆಯುವದಿಲ್ಲ" ಎಂದರು ಜೈಲರರು. ಸುಪರಿಂಟೆಂಡೆಂಟರು ಮುಂದುವರಿದರು. ಆ ಕೈದಿಯೊಂದು ನಮೂನೆಯ ಮನುಷ್ಯ. "ಆ ಕಾರ್ಡಿನಲ್ಲಿ ಬರೆದುದನ್ನೇ ಬರೆಯುತ್ತೇನೆ ಸ್ವಾಮಿಾ. ಅವರ ಎಡ್ರೆಸ್........" ಏನೇನೋ ಹೇಳುವದರಲ್ಲಿದ್ದ. ಅಷ್ಟರಲ್ಲಿ ವಾರ್ಡರನು 'ಇಶ್ ಬಾಯಿ ಮುಚ್ಚು' ಎಂದುದರಿಂದ ಸುಮ್ಮನಿರಬೇಕಾಯಿತು. ಕೈದಿಗಳಿಗೆ ಮೂರು ತಿಂಗಳಿಗೊಂದು ಪತ್ರ ಬರೆಯುವುದಕ್ಕೆ- ಬಂದುದನ್ನು ತೆಗೆದುಕೊಳ್ಳುವದಕ್ಕೆ ಮಾತ್ರ ಅಧಿಕಾರವಿದೆ. ಮೂರು ತಿಂಗಳಿಗೊಂದು ಸಲ ಅವರು ಹೊರಗಿನವರ ಭೇಟಿ ಪಡೆಯಬಹುದು. ಈ ಭೇಟಿಯು ಬುಧವಾರ ಮತ್ತು ಶನಿವಾರಗಳಲ್ಲಿ ಮಾತ್ರ ನಡೆಯುತ್ತದೆ.

**ಹೆಂಗಸರ ಕೋಣೆ**

ನಾನು ಕನ್ನಾನೂರಿನಲ್ಲಿರುವಾಗ ಅಲ್ಲಿ ಹೆಂಗಸರನ್ನೂ ಇಡುತ್ತಿದ್ದರು. ಈಗ ಹೆಂಗಸರ ಜೈಲು ವೆಲ್ಲೂರಿನಲ್ಲಿ ಮಾತ್ರವುಂಟಂತೆ. ಕನ್ನಾನೂರಿನಲ್ಲಿ ಹೆಂಗಸರ ಜೈಲು ಕಾರಾಗಾರದೊಳಗೆ ಪಶ್ಚಿಮ ಮೂಲೆಯಲ್ಲಿತ್ತು. ಕೇವಲ ೨೩ ದಿನಗಳಿದ್ದ ನನ್ನನ್ನು ಬಿಡಿ- ವರ್ಷಗಟ್ಲೆ ಕನ್ನಾನೂರಿನಲ್ಲಿದ್ದವರು ಕೂಡ ಆ ಕೋಣೆಯ ಹೊರಗಿನ ದಪ್ಪ ಗೋಡೆಯನ್ನಲ್ಲದೆ ಗೋಡೆಯೊಳಗಿನವರನ್ನು ಒಮ್ಮೆಯೂ ಕಂಡದ್ದಿಲ್ಲವಂತೆ. ಹೆಂಗಸರ ಜೈಲಿನ ಗೋಡೆಯೆಂಬುದು ಸುತ್ತುವಲಯದ ಕಾರಾಗಾರದಷ್ಟೇ ಅಜೇಯವಾಗಿತ್ತು. ಊರು ಮನೆ ಬಿಟ್ಟು ಬಂದು ವರುಷಗಳಾದ ಕೆಲವರು, ಕೆಲಸದ ಹೊತ್ತಿನಲ್ಲಿ ಕೂಡಾ ಆ ಗೋಡೆಯ ಕಡೆಗೆ ನೋಡಿ ಬಾಯಿ ನೀರೂರಿಸುತ್ತಿರುವದನ್ನು ನಾನು ಕಂಡಿದ್ದೇನೆ. ನಿಮ್ಮ ಯಾವ ಕವಿಯಾದರೂ ಆ ಗೋಡೆಯೊಳಭಾಗದ ವಹಿವಾಟನ್ನು ದೂರ ನಿಂತು ಅವರಷ್ಟು ಸೊಗಸಾಗಿ ಬಣ್ಣಿಸಲಾರನು. ಏನಾದರೇನು? ಅವರಿಗೆ ಕಾಣಿಸುತಿದ್ದ ಆ ಗೋಡೆ ಮಾತ್ರ ಈ ಗಂಡುಸರಿಗೂ ಮಿಕ್ಕಿದ ಗಂಡುಸುತನವನ್ನು ತೋರಿಸುತ್ತಾ ನಿಂತಿತ್ತು!

**ವೆಲ್ಲೂರು ಪಯಣ.**

ಅಂತೂ ನಾನು ಕನಾನೂರಿನಲ್ಲಿದ್ದುದು ಕೇವಲ ಇಪ್ಪತ್ತಮೂರು ದಿನ. ಒಂದೇ ಖಟ್ಲೆಯಲ್ಲಿ ಶಿಕ್ಷೆಗೊಳಗಾದವರನ್ನು, ಒಟ್ಟಿಗೆ ಒಂದೇ ಜೈಲಿನಲ್ಲಿಡುವುದು ಜೈಲುಕ್ರಮಕ್ಕೆ ವಿರುದ್ಧವಂತೆ. ಸೋಜ, ಅಹಮ್ಮದ್ ಮತ್ತು ನಾನು ೨೩ ದಿನಗಳ ವರೆಗೆ ಕನಾನೂರಿನಲ್ಲಿ ಒಟ್ಟಿಗಿದ್ದೆವು. ಆ ಮೇಲೆ ನನಗೆ ವೆಲ್ಲೂರಿಗೆ ವರ್ಗವಾಯಿತು. ಕನ್ನಾನೂರಿನೊಳಗೆ ಕಾಲಿಟ್ಟ ೨೪ನೇ ದಿನ ಸುಮಾರು ಅಪರಾಹ್ನ ೪ ಘಂಟೆ ಹೊತ್ತಿಗೆ ಇತರ ಆರು ಮಂದಿಯೊಟ್ಟಿಗೆ ನಾಲ್ಕು

ರು ಪೋಲಿಸರ ಅಧೀನವಾಗಿ ಪ್ರಸಿದ್ಧ ಬಂದೀಖಾನೆಯನ್ನು ಬಿಟ್ಟೆ. ನನ್ನೊಡನಿದ್ದವರ ಪೈಕಿ ನಾಲ್ವರು ಹೆಂಗಸರು. ಅಷ್ಟು ದಿನಗಳ ನಂತರ ನಾನು ಹೊಸದಾಗಿ ಹೆಣ್ಣು ಜಾತಿಯ ಮುಖ ಕಂಡೆ. ಅವರಲ್ಲೊಬ್ಬಳು ೨೦ವರ್ಷ ಶಿಕ್ಷೆಗೊಳಗಾದ ಕಠಿನ ಆಸಾಮಿ. ಉಳಿದವರು ಐದು, ಮೂರು ಮತ್ತು ಎರಡು ವರುಷ ಶಿಕ್ಷೆಗೊಳಗಾದವರು. ಮಿಕ್ಕುಳಿದ ಇಬ್ಬರು ಪುರುಷ ಕೈದಿಗಳಲ್ಲಿ ಒಬ್ಬನು ವೀರರಾಜಪೇಟೆಯ ಪೋಲಿಸನೆಂದು ಕೇಳಿದೆ. ಎಲ್ಲಿಯೋ ಬಂದೋಬಸ್ತಿಲ್ಲದೆ ಇದ್ದ ಪವನು ಸರವೊಂದನ್ನು ಬಂದೋಬಸ್ತಿನಲ್ಲಿಡುವ ಪೋಲಿಸುಡ್ಯೂಟಿಯನ್ನು ಮಾಡಿದುದಕ್ಕಾಗಿ ಶಿಕ್ಷೆಪಡೆದವನಂತೆ! ಮತ್ತೊಬ್ಬರು ನಮ್ಮ ಜಿಲ್ಲೆಯ ಪುತ್ತೂರು ತಾಲೂಕಿನ ಸೆಟ್ಟರು. 'ಹೆಬ್ಬಾಗಿಲು ಮಾರಿಹೋದರೂ ಬಿಡೆ'ನೆಂದು ಪಂಥ ಹಾಕಿ ದೊಂಬಿಗಿಳಿದವರು. ಡೊಂಬಿಯಾದ ಮೇಲೆ ಅವರ ಕುಟುಂಬದವರು ಹೆಬ್ಬಾಗಿಲನ್ನು ಕೊಂಡು ಹೋಗುವದಕ್ಕೂ ಬಿಡಲಿಲ್ಲ; ತಾವಾಗಿ ಹೆಬ್ಬಾಗಿಲು ದಾಟಿ ಬೆಂಬಲಕ್ಕೆ ಬರಲೂ ಇಲ್ಲ. ಹೀಗಾಗಿ ಸೆಟ್ಟ್ರು ಏಳು ವರುಷಗಳ ವರೆಗೆ ಕನಾನೂರು ಯಾ ವೆಲ್ಲೂರಿನ ಹೆಬ್ಬಾಗಿಲು ದಾಟಿ ಹೊರಹೋಗದಂತಾಗಿತ್ತು ನಾಲ್ವರು ಹೆಂಗಸರನ್ನೇ ಜತೆಮಾಡಿ ಕೈಕೋಳ ಸಿಕ್ಕಿಸಿದರು. ನಮಗೆ ಮೂವರಿಗೆ ಒಟ್ಟಿಗೆ ಕೀಲು ಜಡಿದರು. ನಾವು ಕನಾನೂರಿನಲ್ಲಿ ರೈಲು ಹತ್ತುವಾಗ ಅಪರಾಹ್ನ ೪ಘಂಟೆಯಾಗಿರಬಹುದು. ಸಬ್ ಜೈಲಿನಿಂದ ಕನಾನೂರು ಜೈಲಿಗೆ ಸಾಗಿಸಿದ ಕ್ರಮ ಹೇಳಿರುವೆನಲ್ಲ-ಜೈಲಿನಿಂದ ಜೈಲಿಗೆ ಕೊಂಡುಹೋಗುವ ರೀತಿಯು ಅದೇ.

### ವೆಲ್ಲೂರು ಸಬ್ ಜೈಲು

ನಾವು ಪೂರ್ತಿ ಒಂದು ದಿವಸವನ್ನು ರೈಲಿನಲ್ಲಿ ಕಳೆದೆವು. ನನಗೇಕೋ ಅಂದಿನ ಪ್ರಯಾಣದಲ್ಲಿ ಅಷ್ಟೊಂದು ಬೇಸರವೆನಿಸಲಿಲ್ಲ. ಕೈಕೋಳದೊಡನೆ ಮುಂಭಾಗದ ಡಬ್ಬಿಯಲ್ಲಿ ಕುಳಿತಿದ್ದ ಆ ನಾಲ್ವರು ಹೆಂಗಸರು ಕೈಕೈಹಿಡಿದುಕೊಂಡು ಕುಳಿತಂತೆ ತೋರುತ್ತಿತ್ತು. ಅವರ ಪೈಕಿ ೨೦ವರುಷ ಶಿಕ್ಷೆಗೆ ಗುರಿಯಾದವಳು ಇನ್ನೂ ತರುಣಿಯಿದ್ದಳು. ನನಗೆ ಅವಳ ಚರಿತ್ರೆಯನ್ನು ತಿಳಿಯಬೇಕೆಂಬ ಕುತೂಹಲ. ನಮ್ಮೊಳಗೆ ಆಗಾಗ ಕೆಲವು ಮಿನಿಟುಗಳ ವರೆಗೆ ದೃಷ್ಟಿಯುದ್ಧವು ನಡೆಯುತ್ತಿತ್ತು. ಪೋಲಿಸರು ನಮ್ಮನ್ನು ಹಂಗಿಸಿ ಬೈಯುವ ಮಾತುಗಳಿಂದ ನಮ್ಮೊಳಗೆ ಪರಸ್ಪರ ತಕ್ಕಮಟ್ಟಿನ ಪರಿಚಯವಾಯಿತು. ಆ ಹುಡುಗಿ ತನಗಾಗುವವನ ಸಹಾಯದಿಂದ ಒಂದು ರಾತ್ರಿ ಗಂಡನನ್ನು ಕತ್ತು ತಿವಿದು ಕೊಲೆಮಾಡಿದ್ದಳು— ಅಥವಾ ಆ ರೀತಿ ರಿಕಾರ್ಡಾಗಿತ್ತು. ನನಗೆ ವಿಶೇಷವಾಗಿ ಕಂಡುಬಂದುದೆಂದರೆ ಆ ಕಾಲದಲ್ಲಿ ಅವಳ ಮುಖದಲ್ಲಿದ್ದ ಒಂದು ವಿಧದ ಉತ್ಸಾಹ. ಅದು ಆ ಕಾಲದಲ್ಲಿ ಹೇಗೆ ಮೂಡಿತೋ! ದೀರ್ಘಾವಧಿ ಉಪವಾಸವಿದ್ದ ಅವಳ ಕಣ್ಣುಗಳು ಪುರುಷ ಮುಖವನ್ನು ಕಂಡುದರಿಂದಲೋ, ಅದರ ಗಾಳಿ ಸೋಂಕಿದುದರಿಂದಲೋ ಆಗಿರಬೇಕು! ಅಂತೂ ನಾವು ಮರುದಿನ ಸಂಜೆ ಆರುಘಂಟೆ ಸಮಯಕ್ಕೆ ವೆಲ್ಲೂರು ರೈಲ್ವೇ ಸ್ಟೇಶನಿನಲ್ಲಿಳಿದೆವು. ಸೆಂಟ್ರಲ್ ಜೈಲುಗಳಲ್ಲಿ ಸಂಜೆ ೫ಘಂಟೆಯ ನಂತರ ಕೈದಿಗಳನ್ನು ಒಳಗೆ ಬರಮಾಡಿಸಿಕೊಳ್ಳುವುದಿಲ್ಲ. ವೆಲ್ಲೂರು ನಗರದ ನಡುವೆ ಒಂದು ಸಬ್ ಜೈಲಿದೆ. ನಮ್ಮನ್ನಾರಾತ್ರಿ ಅದರೊಳಗಿಟ್ಟರು. ಅಲ್ಲಿ ಸ್ತ್ರೀ-ಪುರುಷರು ನಾವು ಬೇರೇಯಾದೆವು. ಇಡೀ ರಾತ್ರಿ ನುಸಿಗಳ ಕಾಟದಿಂದ, ಹಾಗೂ ತಲೆಯೊಳಗೆ ನುಸುಳುವ 'ಹುಸಿ'ಗಳ ಕಾಟದಿಂದ ನನಗೆ ನಿದ್ದೆ ಹತ್ತಲಿಲ್ಲ. ಆ ಜೈಲುಗಳ ವಾರ್ಡರರಾಗಬಹುದು, ಈ ಜೈಲಿನ ನುಸಿ ಬೇಡಪ್ಪಾ ಅನ್ನಿಸಿತು. ಒಂದು ನುಸಿಯನ್ನು ಉಪಾಯದಿಂದ ಹಿಡಿದುನೋಡುತ್ತೇನೆ-ಅದು ನಮ್ಮತ್ತ ಕಡೆಯ ನುಸಿಯ ಮೂರು ಪಾಲಷ್ಟು ದೊಡ್ಡದಿತ್ತು. ಅಷ್ಟು ದೊಡ್ಡ ಜಾತಿಯ ನುಸಿಯನ್ನು ನಾನು ಬೇರೆಲ್ಲಿಯೂ ನೋಡಿರಲಿಲ್ಲ.

### ವೆಲ್ಲೂರು ಜೈಲಿನ ಕ್ವರೆಂಟೈನ್

ಮರುದಿನ ಬೆಳಿಗ್ಗೆ ನಮ್ಮನ್ನು ವೆಲ್ಲೂರು ಸೆಂಟ್ರಲ್ ಜೈಲಿಗೆ ಕೊಂಡು ಹೋದರು. ಜೈಲಿನ ಭಾಗವೆಲ್ಲಾ ಕನ್ನಾನೂರು ಜೈಲಿನಂತೆಯೇ ಇತ್ತು. ವಿಧಿವಿಹಿತ ಪ್ರಕಾರ ನಮ್ಮನ್ನು ದಾಖಲೆಗೆ ಸೇರಿಸಿಕೊಂಡ ಮೇಲೆ ಅಲ್ಲಿಯೂ ಕ್ವರೆಂಟೈನಿಗೆ ಕಳುಹಿಸಿದರು. ಕನ್ನಾನೂರು ಜೈಲಿನಲ್ಲಿ ನನಗಿದ್ದುದು ಸಿಪ್ಪೆ ಗುದ್ದುವ ಕೆಲಸ. ಇಲ್ಲಿ ಕಲ್ಲೊಡೆಯುವ ಕೆಲಸ ದೊರೆಯಿತು! ದೇವಾ! ಆ ಶಿಲೆಕಲ್ಲಾದರೂ ಜೈಲಧಿಕಾರಿಗಳ ಹೃದಯದಷ್ಟೇ ಕಠಿನ! ಹಿಡಿದವನೇ ಬಿಡದೆ ಹತ್ತು ಪೆಟ್ಟು ಬಡೆದು ಎರಡು ಮೂರು ತುಂಡು ಹಾರಿಸಿದೆ. ಅಂಗೈ ಉರಿಯುತ್ತದೇಕೆಂದು ನೋಡುತ್ತೇನೆ— ಬೆರಳ ಸಂದುಗಳಲ್ಲಿ ಬುಗರಿಯಂತಹ

# ತೆರೆಯ - ಮರೆಯಲ್ಲಿ

[ ಈ ವಿಭಾಗದಲ್ಲಿ ನಮ್ಮ ನೂರಾರು ಪ್ರಿಯ ವಾಚಕರು ಕಳುಹಿಸುವ ಲೇಖನ, ಪ್ರಶ್ನೆ ಮೊದಲಾದುವುಗಳಿಗೆ ವಿನೋದದಲ್ಲಿ ಅವಶ್ಯವಿರುವ ಉತ್ತರವನ್ನು ಕೊಡಬೇಕೆಂದಿದ್ದೇವೆ. ಇದನ್ನು ಸಂಬಂಧಪಟ್ಟವರು ವಿನೋದ ದೃಷ್ಟಿಯಲ್ಲಿ ಕಾಣಬೇಕಲ್ಲದೆ ಅನ್ಯಥಾ ಭಾವಿಸಬಾರದು. —ಸಂ. ಅಂ. ]

**ಶ್ರೀ. ಜಿ.ಡಿ.ಯಂ. ಕುಮಟಾ:-**

ನೀವು ಹೆರಿಗೆ ಕೆಲಸದಲ್ಲಿ ಪ್ರವೀಣೆಯಾದೊಬ್ಬ ಸೂಲಗಿತ್ತಿಯೊಡನೆ ನಿಮ್ಮ ಪ್ರಶ್ನೆಗಳನ್ನು ಕೇಳುವುದು ಲೇಸು. ಆದರೆ ಪ್ರಶ್ನೆಕೇಳುವ ಮೊದಲು ಖಂಡಿತವಾಗಿಯೂ ನಿಮಗೆ ಸಿಗಬಹುದಾದ ಮಧುರ ತಾಡನಕ್ಕೆ ಸಿದ್ಧರಾಗಿರಬೇಕು!

ooo

**ಶ್ರೀ. ಬಿ. ಆರ್. ಯಸ್. ಬಿಡದಿ:**

ನೀವು 'ಸಂಸಾರ ಸಂಬಂಧ'ವನ್ನು ಬರೆದು ಕಳುಹಿಸುವುದಕ್ಕಿಂತ ನಿಮ್ಮ ನೆರೆಹೊರೆಯ ಮಕ್ಕಳಿಗೆ ಅಜ್ಜಿ ಕತೆಯಂತೆ ಹೇಳಬಹುದಿತ್ತು. ಪತ್ರಿಕೆಗಳ ಕತೆಯನ್ನೋದುವವರು 'ಬೆಳೆದ ಮಕ್ಕಳೆ'ಂದು ನಿಮಗೆ ತಿಳಿದಿಲ್ಲವೆ?

ooo

**ಶ್ರೀ. ಕೆ. ಜೆ. ಡಿ. ಕಿನ್ನಿಗೋಳಿ:-**

ಚತುರರಿದ್ದೀರಿ! ನೀವು ಸೈಕಲ್ ಸವಾರಿಯಲ್ಲಿ ಪ್ರವೀಣರೆಂಬುದನ್ನು ಇತರರಿಗೆ ತಿಳಿಸುವುದಕ್ಕಾಗಿ ಈ ಉಪಾಯವೆ? ನೀವು ಅಂಥ 'ಫೀಟ್ಸ್' ಮಾಡುವುದಿದ್ದರೆ ಅತ್ಯುತ್ತಮವಾದ ಫೀಟ್ಸಿನ ಒಂದು ಭಾವಚಿತ್ರವನ್ನು ನನಗೆ ಕಳುಹಿಸಿಕೊಡಿರಿ. ನಮ್ಮ ವಾಚಕರೂ ಅದನ್ನು ನೋಡಲಿ.

**ಶ್ರೀ. ಆರ್. ಕೆ. ವಿ. ಎಸ್. ಮಂಡ್ಯ:—**

ಇದೇಕಿಷ್ಟು ಗಡಿಬಿಡಿ? ಮದುವೆಯೆಂದರೆ 'ಅಪಮಾನ'ವೆಂದು ನಿಮಗೆ ಹೇಳಿದವರಾರು? ಕುಮಾರಿ ಶಾಂತಾ ಆಪ್ಟೆಗೆ ಮದುವೆಯಾಗುವುದಿಲ್ಲವೆಂದು ನಿಮ್ಮ ಭಾವನೆಯೆ? ಲೋಕದಲ್ಲಿ ಮದುವೆಯನ್ನು ಅಪಮಾನ, ಅಪವಿತ್ರವೆಂದು ಭಾವಿಸುವವರು ಪ್ರಾಯಶಃ ಹೆಚ್ಚು ಮಂದಿ ಇರಲಿಕ್ಕಿಲ್ಲ. ನಿಮ್ಮ ಪ್ರಶ್ನೆಯನ್ನು ನೋಡುವಾಗ ನೀವು ಸನ್ಯಾಸಾಶ್ರಮಕ್ಕೆ ಸೇರಲು ಸಿದ್ಧರಾಗಿರುವಂತೆ ಕಾಣುತ್ತದೆ!

ooo

**ಶ್ರೀ. ಯಸ್. ಯಸ್. ಕೊತ್ವಾಲರಾಮಯ್ಯನ ಬೀದಿ, ಮೈಸೂರು**

ಭೇಷ್! ಕವನದಲ್ಲಿಯೇ ಪ್ರಶ್ನೆ ಕೇಳಿ ಬಿಟ್ಟಿದ್ದೀರಿ. ನೀವು ಪದ್ಯರೂಪದಲ್ಲಿಯೇ ಮಾತಾಡುವವರೋ ಎಂಬ ಸಂಶಯವಾಗುತ್ತಿದೆ. ಸರಿ. ಮೊದಲೊಬ್ಬ ಕವಿ ಮನೆ ಸುಟ್ಟು ಬೂದಿಯಾಗುವಾಗ 'ನೀಮ್ಮಾ ಮನೆ ಸೂಟ್ಟೋಽಽಽ ಬೂಊಊದಿ ಯಾಆ ಆಗುತ್ತಿದೇ ಏ ಏ ಸ್ವಾಮಿಈ!" ಯೆಂದು ಹಾಡಿರುವನಂತೆ. ನೀವು ಅವನನ್ನು ಅನುಸರಿಸುವ ಯತ್ನ ಮಾಡಿರಲಿಕ್ಕಿಲ್ಲವಷ್ಟೇ?

ooo

**ಶ್ರೀ. ಬಿ. ಯಚ್. ಹಳೆಕೋಡಿ: ಬಾರ್ಕೂರು**

ನಿಮ್ಮ ಪ್ರಶ್ನೆಯನ್ನೋದುವಾಗ, ಒಬ್ಬ ಹೊಟ್ಟೆ ನೋವಾದುದಕ್ಕೆ ಮಡದಿಯತಲೆಗೆ ಮದ್ದು ಹಚ್ಚಿದ ಕತೆಯ ನೆನಪಾಗುತ್ತದೆ. "ನಮ್ಮ ಪುಸ್ತಕದವರು ನಿಮಗೆ ಸರಿಯಾಗಿ ಅವರ ಪುಸ್ತಕವನ್ನು ಕಳುಹಿಸದಿದ್ದರೆ— 'ಅಯ್ಯಾ, ನಿಮ್ಮ ಪುಸ್ತಕವನ್ನು ನೀವು ಸರಿಯಾಗಿ ಕಳುಹಿಸದಿರುವುದರಿಂದ 'ನಮ್ಮ ಹಣ'ವನ್ನು ದಯಮಾಡಿ ಹಿಂದೆ ಕಳುಹಿಸಿಬಿಡಿರೆಂದು ಬರೆಯಿರಿ. ಮತ್ತೂ ಕಳುಹಿಸದಿದ್ದರೆ 'ನಮ್ಮ ಪುಸ್ತಕ'ಕ್ಕೆ ಕೊಟ್ಟ ಹಣ "ನಮ್ಮ ಜೇಬಿ"ನೊಳಗೆ ಬಿದ್ದಂತೆಯೇ ಎಂದು ಭಾವಿಸಿ ಸಮಾಧಾನ ಪಡಿರಿ!

ooo

**ಶ್ರೀ. ಜಿ. ಎ. ಕೆ. ರಾವ್, ಬ್ರಹ್ಮಗಿರಿ, ಉಡುಪಿ.**

ನಿಮ್ಮ ಮಿತ್ರರು ಹೆದರಬೇಕಾಗಿಲ್ಲ. ಅವರಿಗೆ ಬೇಸರವಾದಾಗ ನನಗೆ ಬರೆಯಲಿ. ನನ್ನ ಉತ್ತರ ಕಂಡು ಅವರು ಮತ್ತಷ್ಟೂ ಹೆದರಿದರೆ ಅದಕ್ಕೆ ತಕ್ಕ ಉಪಶಮನವನ್ನು ಮಾಡೋಣ. ಅದಂತಿರಲಿ. ನಿಮ್ಮ ಇನ್ನೊಂದು ಪ್ರಶ್ನೆಯನ್ನು ನೋಡುವಾಗ ಮೋಟಾರು ಟಿಕೇಟು ತೆಗೆದುಕೊಳ್ಳಲು ಹೋದವ "ಬಸ್ಸಿಗೇನು ಕ್ರಯ ಏಜಂಟರೇ?" ಎಂದು ಕೇಳಿದ ಕತೆಯ ನೆನಪಾಗುತ್ತದೆ!

# "ಅಂತರಂಗ"ದ ಪ್ರಥಮ ಸ್ಪರ್ಧೆಯ

# ಬಹುಮಾನ ವಿತರಣೆ

## ಸ್ಪರ್ಧೆಯ ಸರಿಯಾದ ಉತ್ತರ;
## ಬಹುಮಾನ ಪಡೆದವರ ಹೆಸರುಗಳು.

| | | | | | | | | |
|---|---|---|---|---|---|---|---|---|
| ವಿ | ನೋ | ದ | ಮ | ಯ | | ಕ | ವ | ನ |
| ರಾ | | ರ | | ಮ | ಧು | ರ | | ವೀ |
| ಮ | ನೋ | ಹ | ರ | | ರ | | ಮಾ | ನ |
| | ಹ | ಸಿ | | | | ವ | ನ | |
| ಸಂ | | ತ | ಪ | | ಮ | ಧು | ಮ | ಯ |
| ಭಾ | ಗ | | ರ | ಗ | ಳೆ | | ರ್‍ಯಾ | |
| ಷ | ಡಾ | ಗ | ಮ | | ನೀ | ರ | ದೆ | |
| ಚಂ | | ರು | | ತ | ರು | ಣ | | ಜ |
| ದ್ರ | ವಿ | ಡ | | ಡಿ | | ದ | ಮ | ನ |

### ಸರಿಯಾಗಿ ಬಿಡಿಸಿದವರು.

೧ ಶ್ರೀ. ಬಿ. ಚಂದಪ್ಪ ಇಂದ್ರ, ಮೂಡಬಿದ್ರೆ.
೨ ,, ಶೈವಲಿನೀ, ಬೊಂಬಾಯಿ.
೩ ,, ಡಿ. ಸೀತಾರಾಮ ಅಡಿಗ, ರಾಮಕುಂಜ.
೪. ,, "ಮಲ್ಲಿಗೆ", ಮದ್ರಾಸ್.
೫ ,, ಟಿ. ಆರ್. ಭಾಗವತ್, ಧಾಗವಾಡ.
೬ ,, ಜಿ. ಕೆ. ಶರ್ಮಾ, ಸಿರ್ಸಿ.
೭ ಎಸ್. ಎಸ್. ಲಕ್ಷ್ಮಣಾಚಾರ್ಯ, ಕೃಷ್ಣರಾಜಸಾಗರ.
೮ ,, ಪಿ. ಕೆ. ರಾವ್, ಮದ್ರಾಸ್.

ಪ್ರತಿಯೊಬ್ಬರಿಗೂ ರೂ. ೩-೨-೦ಕ್ಕೆ ಚಕ್ಕನ್ನು ಬುಕ್ ಪೋಸ್ಟ್ ಮೂಲಕ ರವಾನಿಸಿಯದೆ.

### ಒಂದು ತಪ್ಪಿದ್ದವರು.

೧ ಶ್ರೀ. ಐ. ಶ್ರೀಧರ ಭಟ್ಟ, ಕೆಮ್ಮಣ್ಣು.
೨ ,, ಎಚ್ ಸುಬ್ರಾಯ ಪೈ, ಉಡುಪಿ.
೩ ,, ಬಿ. ಶ್ರೀಧರಮೂರ್ತಿ ಶಿವೊಗ್ಗಾ.
೪ ,, ಬಿ. ಅನಂತಾಚಾರ್ಯ, ,,
೫ ,, ಟಿ. ಆರ್. ಭಾಗವತ್, ಧಾರವಾಡ.
೬ ,, ಡಿ. ,,
೭ ,, ಪಿ. ಪದ್ಮಾಬಾಯಿ, ತ್ರಿವೇಂದ್ರಂ.

ಪರ್ಯಾಯ ಸವನೀರ್ ವುಸ್ತಕವನ್ನು ಬುಕ್‌ಪೋಸ್ಟು ಮೂಲಕ ರವಾನಿಸಿಯದೆ.

### ಎರಡು ತಪ್ಪಿದ್ದವರು.

೧ ಶ್ರೀ. ಮುಕುಂದರಾಮ ಪ್ರಭು. ಕುಮ್ಟಾ.
೨ ,, ಎಮ್. ನಾರಾಯಣ ಭಟ್ಟ, ಫಡಕೆ ಮಂಡಾಜೆ.
೩ ,, ಕೆ. ರಾಮ ಶೆಟ್ಟಿ, ಸಕಲೇಶಪುರ.
೪ ,, ಎಸ್. ಚಂದ್ರರಾಜೇಂದ್ರ ವಿಶಾರದ ಜೈನಿ, ಧರ್ಮಸ್ಥಳ.
೫ ,, ಸುಬ್ರಾಯ ದೇಣ್ಣಾ ನ್ಯಾಕ್, ಕುಮ್ಟಾ.
೬ ,, ಟಿ. ಆರ್. ಭಾಗವತ್, ಧಾರವಾಡ.
೭ ,, ಜಿ. ಎಸ್. ಪಂಡಿತ, ಸಿರ್ಸಿ.
೮ ,, ಎ. ಬಿ. ಲಕ್ಷ್ಮೀಬಾಯಿ.

"ಪುರಂದರದಾಸರ ಕೀರ್ತನೆ"ಯನ್ನು ಬುಕ್ ಪೋಸ್ಟು ಮೂಲಕ ರವಾನಿಸಿಯದೆ.



ಅಂತರಂಗದ
ನಂಬ್ರ ೨ನೇ ಸ್ಪರ್ಧೆಗೆ
ಉತ್ತರಗಳನ್ನು ಕಳುಹಿಸತಕ್ಕವರು
ಈ ಕೂಪನುಗಳಲ್ಲಿ ಬರೆದು
ಕಳುಹಿಸತಕ್ಕದ್ದು.
[ಕವರಿನ ೩ನೇ ಪುಟ ನೋಡಿರಿ.]

ಗೆಳೆಯರ ತಂಡದ
ಮೆಂಬರರಾಗಲು
ಮರೆಯಬೇಡಿರಿ.

## ಅಂತರಂಗ ಸ್ಪರ್ಧೆ—ನಂ. ೨

ಸ್ಪರ್ಧೆಯ ಉತ್ತರಗಳನ್ನು ಈ ಕೂಪನಿನಲ್ಲಿಯೇ ಬರೆದು ಕಳುಹಿಸಬೇಕು.

ಹೆಸರು . . . . . . . . . . . . . . . . . . . . .

ವಿಳಾಸ . . . . . . . . . . . . . . . . . . . . .

. . . . . . . . . . . . . . . . . . . . .

ಸಹಿ . . . . . . . . . . . . . . . . . . . . .

ಉತ್ತರಗಳ ಸಂಖ್ಯೆ. . . . . . . . . . . . . . . . . . .

ಕಳುಹಿಸಿದ ಹಣವೆಷ್ಟು . . . . . . . . . . . . . . . . .

**ಗೆಳೆಯರ ತಂಡದ ಸದಸ್ಯರಾಗುವವರು ಅಂತರಂಗದ ಕೆಳಗಿನ ಕೂಪನಿನಲ್ಲಿ ಬರೆಯಬೇಕು.**

## ಗೆಳೆಯರ ತಂಡದ ಸದಸ್ಯತನದ ಪತ್ರ.

ನಾನು 'ಗೆಳೆಯರ ತಂಡ'ಕ್ಕೆ ಸೇರಲಿಚ್ಛಿಸುತ್ತೇನೆ. ಆ ಬಗ್ಗೆ ಸದಸ್ಯತನದ ಆರು ತಿಂಗಳ ವರ್ಗಣಿಯಾದ ನಾಲ್ಕಾಣೆಯನ್ನು ಕಳುಹಿಸಿರುತ್ತೇನೆ.

ಹೆಸರು. . . . . . . . . . . . . . . . . . . . .

ವಿಳಾಸ. . . . . . . . . . . . . . . . . . . . .

ಉದ್ಯೋಗ. . . . . . . . . . . . . . . . . . . . .

ಸಹಿ. . . . . . . . . . . . . . . . . . . . .

# ನಮ್ಮಲ್ಲಿ

## - ಕನ್ನಡ ಪುಸ್ತಕಗಳು -

| | | | | |
|---|---|---|---|---|
| ಶಾಂತಿ ಪುರಾಣ . . | | 3 | 0 | 0 |
| ಚಂದ್ರಗುಪ್ತ ಚಕ್ರವರ್ತಿ . | | 1 | 0 | 0 |
| ಸರಸ್ವತೀ . . . (ಸಾಮಾಜಿಕ ನಾಟಕ) | | 0 | 8 | 0 |
| ಒಂದೇ ತಿಂಗಳಲ್ಲಿ ಇಂಗ್ಲಿಷ್ . (ಇಂಗ್ಲಿಷ್ ಸ್ವಯಂಬೋಧಿನಿ) | | 0 | 8 | 0 |
| ಸಾಮುದ್ರಿಕ ಶಾಸ್ತ್ರ . . | | 0 | 8 | 0 |
| ಹೊಂದೊವಲ ಹಂಬಲು. . | | 0 | 6 | 0 |
| ವೀರಭೂಮಿ (ಕತೆ) . . | | 0 | 1 | 6 |
| ಗೀತೆಯ ಕೈಗನ್ನಡಿ . . | | 0 | 4 | 0 |
| ಗೀತೆಯ ಮೂಲ . . (ಈಶಾವಾಸ್ಯೋಪನಿಷತ್ತಿನ ಭಾಷಾಂತರ) | | 0 | 1 | 0 |
| ಸ್ತ್ರೀಪದ್ಯರತ್ನಾಕರ ಭಾಗ | I | 0 | 1 | 0 |
| ಡಿ | II | 0 | 1 | 0 |
| ಡಿ | III | 0 | 1 | 0 |
| ಡಿ | IV | 0 | 1 | 0 |
| ಪುರಂದರ ದಾಸರ ಪದ ಭಾಗ | I | 0 | 4 | 0 |
| ಡಿ | II | 0 | 4 | 0 |
| ಡಿ | III | 0 | 4 | 0 |
| ಮಧುವನ . . . | | 1 | 8 | 0 |
| ಧರ್ಮಸಂಕಟ (ಸಾಮಾಜಿಕ ನಾಟಕ) | | 0 | 4 | 0 |
| Gouthama the Buddha | | 0 | 8 | 0 |
| ಭಗವದ್ಗೀತೆ . . . | | 0 | 2 | 0 |
| ಕುಕ್ಕುಟ ಪಂಚಾಂಗ . . | | 0 | 1 | 0 |
| ಮಗ್ಗಿ . . . | | 0 | 1 | 6 |
| ತುಳುನಾಡ್ ತಿಲಕ ಪಂಚಾಂಗ . | | 0 | 1 | 0 |
| ವೈಜಯಂತೀ ಪಂಚಾಂಗ . | | 0 | 2 | 6 |
| ಜಯಪಾಂಡ್ಯ ವಿಜಯ . . | | 0 | 2 | 0 |

## - ತುಳು ಪುಸ್ತಕಗಳು -

| | | | |
|---|---|---|---|
| ಕೃಷ್ಣಸಂಧಾನ (ಪ್ರಸಂಗ) . (ಕನ್ನಡ ಕೃಷ್ಣಸಂಧಾನವನ್ನೊಳಗೊಂಡಿದೆ.) | 0 | 8 | 0 |
| ಬಲೀಂದ್ರ (ಕತೆ) . . | 0 | 2 | 0 |
| (ವಿಮರ್ಶಾತ್ಮಕ ಲೇಖನ) | | | |
| ಅಳಿಯ ಸಂತಾನ ಕಟ್ಟ್‌ದ ಗುಟ್ಟು | 0 | 4 | 0 |
| ಕಾನಿಗೆ (ಪದ್ಯ) . . | 0 | 4 | 0 |
| ತುಳುವ್ಯಾಕರಣ . . | 0 | 8 | 0 |
| ಜನಮರ್ಲ್ (ನಾಟಕ) . . | 0 | 6 | 0 |
| ಮದ್‌ಮಾಳತ್ತ್ ಮದ್‌ಮಾಯೆ. (ಕತೆ) | 0 | 2 | 0 |
| ಬಂಗಾರ್‌ದಂಗಿದ ಕತೆ . . | 0 | 1 | 0 |
| ಪದ್ಯಮಾಲಿಕೆ . . | 0 | 1 | 0 |
| ಮಿತ್ಯನಾರಾಯಣ ಕತೆ. . | 0 | 8 | 0 |
| ಸತೀ ಕಮಲೆ (ನಾವೆಲ್) . . | 0 | 6 | 0 |
| ಕನ್ಯೋಪದೇಶ . . . | 0 | 2 | 0 |
| ಕನ್ನಡಕೊ . . . | 0 | 0 | 6 |
| ವಾಲಿಸುಗ್ರೀವರ ಕಾಳಗ. . | 0 | 3 | 0 |
| ಬೊಬ್ಬರ್ಯ (ಪಾಡ್ದನ) . . | 0 | 2 | 0 |
| ತೊಡಕಿನಾರ್ ,, . . | 0 | 2 | 0 |
| ಮುಂಡತ್ತಾಯ ,, . . | 0 | 2 | 0 |
| ವಿಶ್ವರೂಪ ದರ್ಶನ . . | 0 | 1 | 0 |
| ಗೀತೆಯ II ನೇ ಅಧ್ಯಾಯದ ಪದ್ಯಾತ್ಮಕ ಭಾಷಾಂತರ) | | | |
| ಭಗವದ್ಗೀತೆ . . | 0 | 5 | 6 |

## ತುಳುನಾಡ್ ಪ್ರೆಸ್, ಉಡುಪಿ.

# PRESERVE YOUR LIFE INSURANCE:

## FOR IT BEGINS WHERE YOU GIVE UP

When you marry you take a contract on your hands to support and bring up a famiy. But, who knows you may have to give up that right in the midst of it. So many have had to do.

It is here that the Life Policy Comes in. It is the bond that helps you to fulfil the contract and keep your honour and your family in tact.

**It Begins where you give up:** It goes ahead and supports the Family, comes through the contract honourably and releases you. It also stands behind and protects your business obligations and your good name.

THIS IS LIFE INSURANCE AND IT IS THE ONLY BOND THAT WILL DO IT

**HAVE THAT POLICY BOND**

IN

# THE LAKSHMI INSURANCE COMPANY LIMITED.

**Head Office: LAHORE.**

For Agency Particulars Please apply to:

**THE BRANCH MANAGER.**
334, THAMBUCHETTY ST.
G. T. MADRAS.


OR


**A. B. KRISHNA RAJ.**
ORGANISER
Ramakrishna Bldgs.,
UDIPI.

# "ಸಂದೇಶ"

ಬರೆದವರು:
'ಗಿರಿಬಾಲೆ'
ಬೆಂಗಳೂರು.

ಶ್ರೀಮತಿಯವರು ಉಡುಪಿಯವರೇ ಇರುವರು. ಬೆಂಗಳೂರು ಕಡೆಯೇ ಹೆಚ್ಚು ವಾಸ 'ಗಿರಿಬಾಲೆ' ಎಂಬ ಅಂಕಿತನಾಮದಿಂದಲೇ ತುಂಬಾ ಬರೆದಿದ್ದಾರೆ. ಇವರ ಮನ ಮುಟ್ಟುವ ಸೊಗುಸಾದ ಅಕೃತ್ರಿಮ ಶೈಲಿಯು ಒದುಗರ ಮನವನುವನು ತಾನಾಗಿ ಸೆಳೆಯುವಂತಿದೆ.

ಹಳ್ಳಿಯ ಹುಡುಗಿಗೆ ನವನಾಗರಿಕನೊಬ್ಬನನ್ನು ಮದುವೆಮಾಡಿದಾಗ ಅನ್ಯಾನ್ಯ ಹಳ್ಳಿಯ ಹೆಂಗಸರಿಗೆ ಏನಾಗಬಹುದೆಂಬುದನ್ನು-ಗಂಡನ ಕೂಡೆ ಆ ಹುಡುಗಿ ಹೇಗೆ ನಡೆದುಕೊಳ್ಳಬೇಕೆಂದೂ ಈ ಕತೆಯಲ್ಲಿ ಸೂಕ್ಷ್ಮವಾಗಿ ಸೊಗಸಾಗಿ ಚಿತ್ರಿಸಿದ್ದಾರೆ.

೦

●

೧

ತಿರುಪತಿ.
3-3-'20

ಪ್ರಿಯ ಅಕ್ಕಾ.

ದೊಡ್ಡವರು ನಿಶ್ಚಯಿಸಿದಂತೆ ಮೈಸೂರು ಮಹಾರಾಜರ ಛತ್ರದಲ್ಲಿ ಶಾರದೆಗೆ ಮಾಂಗಲ್ಯಧಾರಣೆಯು ನಿರ್ವಿಘ್ನವಾಗಿ ನೆರವೇರಿತು. ನಿನಗೆ ಬರಲಾಗದಿದ್ದುದಕ್ಕೆ ನಮಗಾದ ದುಃಖ ಕೊಂಚವಲ್ಲ. ಅಳಿಯಂದಿರು ಲಕ್ಷಣವಾಗಿಯೇ ಇರುವರಾದರೂ ನನಗೇನೋ ಅವರ ನಡೆಯುಡೆಗಳೆಲ್ಲ ಅತ್ಯಂತ ವಿಚಿತ್ರವಾಗಿ ಕಂಡವು. ಏನೆನ್ನಲಕ್ಕಾ! ತಲೆಯಲ್ಲಿ ಶಿಖೆಯೇ ಇಲ್ಲ!............ ಹೆಂಗಸರಂತೆ ಸುಗಂಧ ತೈಲವನ್ನಿಟ್ಟು ಅಂದವಾಗಿ ಬಾಚಿಕೊಂಡಿದ್ದರು! ವಯಸ್ಸು ಇಪ್ಪತ್ತಾಗಿಯೂ ಮುಖದಲ್ಲಿ ಕೂದಲೇ ಬೆಳೆಯದ ಬಾಲನಂತೆ ಕಾಣುವುದಕ್ಕಾಗಿ ಅದನ್ನು ನುಣ್ಣಗೆ ಬೋಳಿಸಿಕೊಂಡಿದ್ದರು! ದೃಷ್ಟಿ ಮಂದವಾಗಿದ್ದರೆ ಕನ್ನಡಕವಿಡುವುದು ನಿಯಮ. ಅದೂ ಸಹ ನಮ್ಮ ಅಜ್ಜನು ಪಂಚಾಗ ನೋಡುವಾಗ ಮಾತ್ರ ಇಟ್ಟುಕೊಳ್ಳುವರು ಆದರೆ, ನಮ್ಮ ಶಾರದೆಯ ಗಂಡನಾದರೋ ಮದುವೆಯ ಮಂಟಪದಲ್ಲೂ ಧರಿಸಿದ್ದರದನ್ನು! ಪಂಚೆಯುಟ್ಟಿರದೆ-ನಮ್ಮ ಕಿಟ್ಟು ಶಾಲೆಗೆ ಹೋಗುವಾಗ ಇಜಾರು ಹಾಕುತ್ತಾನಲ್ಲ, ಅದರಂತೆಯೇ ಅವರು ಹಾಕಿಕೊಂಡಿದ್ದರು! ಆದರೆ ಅವರ ಕಾಲುಗಳು ಮಾತ್ರ ಉದ್ದವಾಗಿದ್ದುವು. ಲಗ್ನವೇಳೆಯಲ್ಲಿ ಮಣೆಯ ಮೇಲೆ ಕುಳ್ಳಿರಲಾರದುದಕ್ಕೆ ಕುರ್ಚಿಯನ್ನೇ ಹಾಕಬೇಕಾಯಿತು. ಪಾದಗಳನ್ನು ಚೀಲಗಳೊಳಗೆ ತುಂಬಿಸಿ, ಅದೇನೋ ಬೂಟೀಸುಗಳಂತೆ ಅವುಗಳೊಳಗೆ ಕುರುಕಿಸಿಕೊಂಡಿದ್ದರು. ಅವುಗಳನ್ನು ತೆಗೆದು ಮಾಂಗಲ್ಯವನ್ನು ಕಟ್ಟಬೇಕೆಂದಾಗ 'ನಾನ್ಸೆನ್ಸ್'ಎಂದೇನೇನೋ ಹೇಳಿ ತೆಗೆದರು. ಹೋಮದ ಹೊಗೆಯನ್ನು ನೋಡಿ ಅವರಿಗುಂಟಾದ ಅಸಹ್ಯವನ್ನು ಹೇಳಲು ಸಾಧ್ಯವಿಲ್ಲ. 'ಇದೆಂಥಾ ಡ್ಯಾಮ್ ಪದ್ಧತಿ- ಕಣ್ಣುಗಳೆಲ್ಲ ಹೋಗಿಬಿಡುವಂತಿದೆಯಲ್ಲ"ಎಂದು ಕೂಗಿಕೊಂಡರು. ಅವರು ಹಾಗೆ ಹೇಳಿದಾಗ 'ಇವರು ಬ್ರಾಹ್ಮಣರು ಹೌದೋ ಅಲ್ಲವೋ ಎಂಬ ಸಂದೇಹ ವುಂಟಾಯಿತು. ಆದರೆ ಅವರ ಮಾವಂದಿರು ನಮ್ಮ ತಂದೆಯವರ ಪರಿಚಯಸ್ಥರಂತೆ. 'ಹೆಚ್ಚು ಸಮಯ ಇಂಗ್ಲೆಂಡಿನಲ್ಲಿದ್ದುದರಿಂದ ಹುಡುಗ 'ನಾಗರೀಕ'ನಾಗಿದ್ದಾನೆ' ಎಂದವರು ಹೇಳಿದರು.

ಈ ವಿಪರೀತ ವರ್ತನೆಯೊಂದು ಬಿಟ್ಟರೆ, ಶಾರದೆಯ ಸೌಂದರ್ಯಕ್ಕೆ ಇಂತಹ ಯಜಮಾನರು ಸಿಕ್ಕಿದುದು ದೊಡ್ಡ ಅದೃಷ್ಟವೆಂದೇ ಹೇಳಬೇಕು. ಶಾರದೆಯೂ ಕುರೂಪಿಯಲ್ಲ. ಬಣ್ಣ ಸ್ವಲ್ಪ ಕಪ್ಪಾದರೂ ಲಗ್ನಮಂಟಪದಲ್ಲಿ ಸಾಕ್ಷಾತ್ ದುರ್ಗೆಯಂತೆಯೇ ಪ್ರಕಾಶಿಸಿದಳು. ಅಗಲ ಅಂಚಿನ ಅಂಬಾಪೇಟೆ ಜರತಾರಿ ಸೀರೆಯನ್ನುಡಿಸಿದ್ದರು. ವಜ್ರದೋಲೆಗಳೂ ಇನ್ನೂ ಹಣವಂತರು ಉಪಯೋಗಿಸುವ ಅನೇಕ ಒಡವೆಗಳನ್ನು ಹಾಕಿದ್ದರು. ಶಾರದೆಯನ್ನು ನಾಳೆಯೇ ಅತ್ತೆಯ ಮನೆಗೆ ಕರೆದುಕೊಂಡು ಹೋಗುವರಂತೆ. ನಾವೂ ಅಗಸೇಹಳ್ಳಿಗೆ ಹಿಂತಿರುಗುವೆವು. ಶಾರದೆಯು ನಿನ್ನ ಆಶೀರ್ವಾದವನ್ನು ಕೇಳಿರುತ್ತಾಳೆ.

ಇತಿ

ನಿನ್ನ ಪ್ರೀತಿಯ ಸುಲೋಚನೆ.

೨

ಅಗಸೇ ಹಳ್ಳಿ.
9-3-'20

ಪ್ರಿಯ ಅಕ್ಕಾ,

ನಾನು ಬರೆದ ಪತ್ರಕ್ಕೇಕೆ ಉತ್ತರ ಹಾಕಲಿಲ್ಲ? ನಿನಗೆ ಸಿಕ್ಕಲಿಲ್ಲವೇನೋ ಎಂದು ಇದನ್ನು ಬರೆಯುತ್ತಿರು

ವೆನು. ನಮ್ಮ ಶಾರದೆಗೆ ಮದುವೆಯಾಗಿಯೂ ಅತ್ತೆಯ ಮನೆಗೆ ಹೋಗಿರುವಳು. ಅವಳ ಪತ್ರವೂ ಬಂದಿರುತ್ತದೆ. ಕೆಳಗೆ ಬಿಟ್ಟರೆ ಇರುವೆ ಕಚ್ಚುವುದೋ, ಮೇಲೆ ಬಿಟ್ಟರೆ ಗಿಡುಗ ಕುಕ್ಕುವದೋ ಎಂಬಂತೆ ಅಷ್ಟು ಪ್ರೀತಿಯಿಂದ ಅವಳ ಅತ್ತೆಯವರು ಅವಳನ್ನು ಕಾಣುತ್ತಾರಂತೆ. ಅದನ್ನು ಕೇಳಿ ನಿನಗೆ ಅತ್ಯಂತ ಆನಂದವಾಗುವುದೆಂದು ನನಗೆ ತಿಳಿದಿದೆ. ಆದರೆ ಅಳಿಯಂದಿರೇನೋ ಒಂದು ರೀತಿಯಾಗಿ ನಡೆದುಕೊಳ್ಳುತ್ತಿರುವರಂತೆ. ಕಲಿಯುಗ ತಾನೆ! ಆ ವಿಷಯ ವಿವರವಾಗಿ ನಿನಗೆ ಪತ್ರ ಬರೆಯುವುದಾಗಿ ಬರೆದಿರುತ್ತಾಳೆ. ಮಗು ಶ್ರೀನಿವಾಸನಿಗೆ ಆಶೀರ್ವಾದ.

ಉತ್ತರವನ್ನೆದುರು ನೋಡುತ್ತೇನೆ.

ಇತಿ

ಸುಲೋಚನೆ.

೩

**ಬೆಂಗಳೂರು**

11—3—20.

ಪ್ರೀತಿಯ ಅತ್ತಿಗೆ,

ನಿಮಗೆಂದು ಹತ್ತಾರು ಪತ್ರಗಳನ್ನು ಬರೆದು ಹರಿದೆ. ಮನದ ಆವೇಗದಿಂದ ಬರೆಯತೊಡಗುವೆನು ಆದನ್ನೋದಿ ನೋಡುತ್ತಲೇ ನನಗರಿಯದೆ ನನ್ನ ಕೈಗಳದನ್ನು ಹರಿದು ಬಿಡುವವು. ಮನೋವೇದನೆಯನ್ನು ಎಷ್ಟು ದಿನ ಸಹಿಸಲಾದೀತು.? ಅದನ್ನು ಹೊರಗೆಡಹುವದೇ ಸರಿಯೆಂದು ತೀರ್ಮಾನಿಸಿ ಈ ಪತ್ರವನ್ನು ಬರಿಯುತ್ತಿದ್ದೇನೆ. ಏನಾದರೂ ಹೆಚ್ಚು ಕಡಿಮೆಗಳಿದ್ದಲ್ಲಿ ಕ್ಷಮಿಸಬೇಕು.

ನನ್ನ ಪ್ರಿಯ ಅತ್ತಿಗೆ; ನನ್ನ ಮ—ದು—ವೆಯ ವಿಷಯವಾಗಿ ಚಿಕ್ಕತ್ತಿಗೆಯವರು ಬರೆದಿರುತ್ತಾರಲ್ಲವೇ? ಹೌದು. ನನಗೆ ಮದುವೆಯಾಗಿ ಹೋಯಿತು.ಆ ಸಮಯದಲ್ಲಿ ನನಗೆ ಅತ್ಯಂತ ಆನಂದವಾಗಿದ್ದರೂ ಈಗ ದುಃಖಪಡುತ್ತೇನೆ.........ಸಿಟ್ಟುಮಾಡುವುದು ಬೇಡ. ಹಿಂದೂ ಸ್ತ್ರೀಯರು ಹೇಳುವ ಮಾತು ಇದಲ್ಲವೆಂದು ನನಗೆ ಚೆನ್ನಾಗಿ ಗೊತ್ತಿದ್ದರೂ, ಪತ್ರವನ್ನು ಪೂರ್ತಿಯಾಗಿ ಓದಿದ ಮೇಲೆ ನಿಮಗೂ ಬೇಸರವಾಗಲಿಕ್ಕಿಲ್ಲ.

ಮನೆಯಲ್ಲಿ ಅತ್ತೆಯವರನ್ನು ಬಿಟ್ಟರೆ ಬೇರಾರೂ ಇಲ್ಲ. ಅವರನ್ನು ದೇವರೆಂದೇ ಹೇಳಬೇಕು. ಅತ್ತಿಗೆ, ಇನ್ನು ನಾನು ಬರೆಯಲಿರುವುದು 'ಅವರ' ವಿಷಯ. ಮದುವೆಯಾಗಿ ಮಾಸವಾಗುವುದರೊಳಗೆ ಪತಿಯನ್ನು ದೂರುವ ಸಾಹಸವತಿಯೆಂದು ನನ್ನನ್ನು ಹಳಿಯುವುದು ಬೇಡ. ನಾನು ಅವರನ್ನು ದೂಷಿಸುವುದಿಲ್ಲ. ನನ್ನನ್ನೇ ಹಳಿದುಕೊಳ್ಳುತ್ತೇನೆ. ಅತ್ತಿಗೆ, ಒಂದು ಮಧ್ಯಾಹ್ನ, ನಾನು ಮಹಡಿಯ ಮೇಲೆ ಕುಳಿತು ಪಂಪರಾಮಾಯಣವನ್ನೋದುತಿದ್ದೆ ಅಯ್ಯೋ ಅತ್ತಿಗೆ,ಆಗ...ಅವರು ..ನನ್ನ ಕೊಠಡಿಗೆ ಬಂದರು! 'ಇದನ್ನು ಬರಿಯಲು ನಾಚಿಕೆ ಇಲ್ಲವೆ? ಎಂದು ನೀವು ಕೇಳಬಹುದು. ಆದರೆ ನಾನೇನು ಮಾಡಲತ್ತಿಗೆ? ಅನಾಥೆಯಾದ ನನಗೆ ನೀವೇ ನನ್ನ ತಂದೆ ತಾಯಿಯರಷ್ಟೆ. ನನ್ನ ಸುಖದುಃಖಗಳನ್ನು ನಿಮ್ಮಲ್ಲಲ್ಲದೆ ಬೇರೆ ಯಾರಲ್ಲಿ ತಾನೆ ಉಸುರಲಿ? ಈ ಅಧಿಕಪ್ರಸಂಗವೆಲ್ಲ ಏಕೆಂದು ಕೇಳುತ್ತೀರಾ ಅತ್ತಿಗೆ? ಹಾಗಾದರೆ ನಡೆದುದನ್ನು ಸಂಕ್ಷೇಪವಾಗಿ ಬರೆದು ಮುಗಿಸುತ್ತೇನೆ.

ಅವರು ನನ್ನ ಕೊಠಡಿಗೆ ಬರುತ್ತಲೇ ನಾನು ನಾಚಿಕೆಯಿಂದ ಎದ್ದುನಿಂತೆ. 'ಏಕೆ ಏಳುತ್ತಿಯೇ, ಆ ಕುರ್ಚಿಯ ಮೇಲೆ ಕುಳಿತುಕೋ' ಎಂದರು. ಅತ್ತಿಗೆ, ನಾನು ಮಾಡಬೇಕಾದುದೇನು ಹೇಳಿ. ಪತಿಯು ಹೇಳಿದಂತೆ ನಡೆಯುವುದು ಪತ್ನಿಯ ಕರ್ತವ್ಯವಲ್ಲವೆ? ಹಾಗೆಂದು ನಾನೀಗ ಅವರೆಂದಂತೆ ಕುರ್ಚಿಯ ಮೇಲೆ ಕುಳಿತುಕೊಳ್ಳಬಹುದೆ? ಪುನಃ ಅವರು ಅದೇಕೆ ಬೆಪ್ಪಳಂತೆ ನಿಂತಿರುವೆ, ಹೀಗೆ ಕುಳಿತುಕೊಳ್ಳಬಾರದೆ? ಎಂದರು. ಅವರ ಕೈಯು ನನ್ನ ಕೈಯನ್ನು ಹಿಡಿದಿತ್ತು! ತಿಂಗಳೊಳಗೆ ಇಷ್ಟು ಸಲಿಗೆಯೇ? ಅವರು ಸ್ವತಂತ್ರರು. ಅವರಿಗಾರ ಭಯ? ಅತ್ತೆಯವರಾದರೋ ತಮ್ಮ ಕೊಠಡಿಯಲ್ಲಿ ಆದಾಗಲೇ ಮಲಗಿದ್ದರು.

'ಏನನ್ನೋದುತ್ತಿರುವೆ?' ಎಂದವರು ಕೇಳಿದರು. ನಾನು ರಾಮಾಯಣವನ್ನವರ ಕೈಗೆ ಕೊಟ್ಟೆನು.ಅಯ್ಯೋ, ಅದನ್ನು ನೋಡುತ್ತಲೆ ಆವರ ಮುಖದಲ್ಲುಂಟಾದ ಬದಲಾವಣೆಯನ್ನೇನೆನ್ನಲಿ?

'ಆ ಹಳ್ಳಿ ಮುದುಕಿಗೆ ಈ ಹಳೆಯ ಪುರಾಣದಲ್ಲಿ ಇಷ್ಟವೆಂದರೆ ನಿನಗೂ ಇದು ಹಿಡಿಯುತ್ತದೆಯೇ?' ಎಂದರು! ನಾನು ಮೌನವಾಗಿಯೇ ಇದ್ದೆ. ಅವರು ಪುನಃ 'ಶಾರದಾ, ನೀನೇಕೆ ಮಾತಾಡುವುದಿಲ್ಲ' ಎಂದರು.

ಅತ್ತಿಗೆ, ನಾನೇನು ಮಾಡಬೇಕು? ನನಗೇನು ಪ್ರತ್ಯುತ್ತರ ಕೊಡಬೇಕೆಂದೇ ತಿಳಿಯಲಿಲ್ಲ. ತಲೆಯೆತ್ತಿ ಒಮ್ಮೆ ಅವರ ಮುಖವನ್ನು ನೋಡಿದೆ.

'ನಿನಗೆ ಏನಾದರೂ ಇಂಗ್ಲೀಷು ಬರುತ್ತದೆಯೇ?' ಎಂದು ತಿರುಗಿ ಕೇಳಿದರು. ಈಗ ಮಾತ್ರ ನಾನು ಮಾತಾಡಿದೆನು. 'ಇಲ್ಲ'ವೆನ್ನುತ್ತಲೇ ಅವರು 'ಅದೇ ನಿನಗೆ

ಮ್ಯಾನರ್ಸ್ ತಿಳಿಯುವುದಿಲ್ಲ' ಎಂದವರೇ ದಢದಢವೆಂದು ಮಹಡಿಯ ಮೆಟ್ಟಲನ್ನಿಳಿದು ಹೋದರು ಅಯ್ಯೋ! ಅತ್ತಿಗೆ ಇದೇನು ವಿಪರೀತವೋ ಎಂದು ನಾನು ನಡುಗಿದೆ. ಹತ್ತು ನಿಮಿಷಗಳೊಳಗೆ ಪುನಃ ನನ್ನೆಡೆಗೆ ಬಂದರು. ಆಗಲವರ ಕೈಯಲ್ಲೊಂದು ಪುಸ್ತಕವಿದ್ದಿತು. ಅವರೆಂದರು.

'ಶಾರದಾ, ಇದನ್ನು ಚೆನ್ನಾಗಿ ಲಕ್ಷ್ಯವಿಟ್ಟು ನೀನು ಓದಬೇಕು....ಇದೋ, ನಿನ್ನಲ್ಲಿ ಕೆಲವು ಸಂಗತಿಗಳನ್ನು ಹೇಳಬೇಕೆನಿಸುತ್ತದೆ. ಇನ್ನು ಮೇಲೆ ನಿನ್ನ ಕೂದಲನ್ನು ಹೀಗೆ ಒರಟಾಗಿ ಕಟ್ಟಿಕೊಳ್ಳ ಬಾರದು. ನಯವಾಗಿ ಬಾಚಿ ಹೆರಳುಬಿಟ್ಟು ರಿಬ್ಬನ್ ಹಾಕಿಕೊಳ್ಳಬೇಕು ಇದೇನಿದು ಮುಖತುಂಬ ಅರಸಿನ ಹಚ್ಚಿಕೊಂಡಿರುವೆ! ನಾಳೆಯೇ ನಿನಗೆ ಸೋಪ್, ಪೌಡರ್ ಮೊದಲಾದವುಗಳ ಉಪಯೋಗವು ಈ ಪುಸ್ತಕವನ್ನೋದುವುದರಿಂದ ತಿಳಿದು ಬಂದೀತು!' ಎಂದೇನೇನೋ ಹೇಳಿ ಹೊರಟು ಹೋದರು.

ನಾನಾ ಪುಸ್ತಕವನ್ನು ತೆರೆದು ನೋಡಿದಾಗ 'ನಾಗರೀಕ ಶಿಕ್ಷಣ' ವೆಂಬಕ್ಷರಗಳು ಕಂಡವು. ಒಂದೆರಡು ಹಾಳೆಗಳನ್ನು ಮಗುಚಿ ನೋಡಿದೆನು. 'ಸ್ತ್ರೀಯರನ್ನು ಸುಧಾರಿತರನ್ನಾಗಿ ಮಾಡುವುದು ಹೇಗೆ?' ಎಂಬ ಅಗ್ರಲೇಖನದ ಕೆಳಗೆ ಒಂದು ಪ್ರಬಂಧವು ಬರೆಯಲ್ಪಟ್ಟಿದ್ದಿತು. ಆಭಾಸಕರವಾದ ಆ ಪ್ರಬಂಧವನ್ನು ಬರೆದಾತನಿಗೆ ಹಿಂದೂ ಸ್ತ್ರೀಯರ ಆದರ್ಶದ ಗಂಧವೇ ತಿಳಿದಿರಬೇಡವೆ? ನನಗದು ರುಚಿಸಲಿಲ್ಲ. ನಾನದನ್ನು ಒಗೆದು ಪುನಃ ರಾಮಾಯಣವನ್ನೇ ಓದಲಾದೆ. ಸುಮಾರು ಅರ್ಧತಾಸಿನೊಳಗೆ ಮಹಡಿಯಲ್ಲಿ ನಡೆಯುವ ಸದ್ದು ಕೇಳಿಸಿತು. ಕೂಡಲೆ ಆ 'ನಾಗರೀಕ ಶಿಕ್ಷಣ' ವನ್ನೆತ್ತಿಕೊಂಡೆನು. ಅವರೂ ಒಳಗೆ ಬಂದರು.

ಅವರ ಕೈಯಲ್ಲಿ ಚರ್ಮದಿಂದಾದ ಸಣ್ಣದೊಂದು ಪೆಟ್ಟಿಗೆಯಿದ್ದಿತು. ಅದನ್ನು ಮೇಜಿನ ಮೇಲಿಟ್ಟು ನನ್ನ ಪಕ್ಕಕ್ಕೆ ತಿರುಗಿ, ಅದೇನೋ...... 'ಮೈಡಿಯರ್' ಎನ್ನುತ್ತ, 'ನಿನಗಾಗಿ ನಾನು ಡ್ರೆಸ್ಸಿಂಗ್ ಕೇಸನ್ನು ತಂದಿರುತ್ತೇನೆ. ಅದರಲ್ಲಿರುವುದನ್ನು ನಿಧಾನವಾಗಿ ನೋಡಿ, ಪುಸ್ತಕದ ಸಹಾಯದಿಂದ ಉಪಯೋಗಿಸುವ ವಿಧಾನವನ್ನೂ ಕಲಿ. ನಾಳೆಯೊಳಗೆ ನೀನು ನನ್ನೊಂದಿಗೆ ಪಾರ್ಕಿಗೆ ಬರಲು ಹೊರಡುವ ಜಾಣೆಯಾಗಬೇಕು' ಎಂದರು!

ಅತ್ತಿಗೆ, ನನಗೇಕೋ ತಲೆ ಸುತ್ತತೊಡಗಿತು. ಒಳ್ಳೇ ಪೇಚೆಯಾಗಿ ನನ್ನ ಅತ್ತೆಯವರು ಆಗ ನನ್ನನ್ನು ಕೂಗಿದರು. ಅದರಿಂದಾಗಿ ಅವರು ಬೇರೆ ಕೋಣೆಗೆ ಹೊರಟು ಹೋದರು..........ಹೀಗೆಯೇ ಅನೇಕ ಸಲ ನನ್ನನ್ನು ಪಾರ್ಕಿಗೆ ಹೋಗೋಣ, ಸಿನೇಮಕ್ಕೆ ಹೋಗೋಣ ನಾಟಕಕ್ಕೆ ಹೋಗೋಣ, ಕ್ಲಬ್ಬಿಗೆ, ಇನ್ನೂ ಎಲ್ಲೆಲ್ಲಿಗೋ ಹೋಗೋಣ ಹೋಗೋಣವೆಂದು ಪೀಡಿಸುತ್ತಿರುವರು. ಆದರೆ, ಒಂದಲ್ಲ ಒಂದು ವಿಘ್ನವುಂಟಾಗಿ ಇಷ್ಟರ ವರೆಗೆ ಬದುಕಿರುತ್ತೇನೆ. ನನಗೆ ಏನು ಮಾಡುವುದೆಂಬುದೇ ತಿಳಿಯುವುದಿಲ್ಲ. ಮುಖಕ್ಕೆ ಅರಸಿನ ಹಚ್ಚಬಾರದಂತೆ, ಬದಲು ಹಿಟ್ಟು ತಿಕ್ಕಬೇಕಂತೆ. ಬಿಳಿ ಸೀರೆ ಉಡಬೇಕಂತೆ, ಮೆಟ್ಟು ಹಾಕಬೇಕಂತೆ, ಇನ್ನೂ ಏನೇನೋ ಹೇಳುವರು. ಅತ್ತಿಗೆ, ಈ ಉಭಯ ಸಂಕಟಕ್ಕೇನನ್ನು ಮಾಡಬೇಕಾದುದೇನು? ನನಗೆ ಏನೂ ತಿಳಿಯುತಿಲ್ಲ. ನಿಮ್ಮ ಆಜ್ಞೆಯನ್ನೇ ಎದುರು ನೋಡುತಿದ್ದೇನೆ.

ಇತಿ,

ನಿಮ್ಮ ವಿಧೇಯ ಶಾರದೆ.

೪

ಮದರಾಸು

15-3-'20.

ಕಣ್ಮಣಿ ಶಾರದಾ,

ನಿನ್ನ ಪತ್ರವು ಕೈಸೇರಿತು. ಓದಿ, ಒಂದೆಡೆ ನಗುವೂ ಒಂದೆಡೆ ದುಃಖವೂ ಉಂಟಾಯಿತು. ಶಾರದಾ, ನಗುವೇಕೆ ಬಂತು ಗೊತ್ತೆ? ಎಲೆ, ನಿನ್ನ ಪತಿಯು ನಿನ್ನ ಕೊರಳಿಗೆ ಬಂದರೆಂದು ಬರೆಯುತ್ತೀಯಲ್ಲಾ, ಅದನ್ನೋದಿ ಯಾರೇ ನಗಲಾರರು? ನಿನ್ನ ಹುಡುಗತನವನ್ನು ನೆನೆಸು

ವಾಗಲೇ ನಗುಬಂ ಅವನ್ನು ಇರತನ್ನೆಡೆಗೆ ಬಂದರೆ ಕೆಟ್ಟು ಹೋದುವೇನು? ಒಂದು ತಿಂಗಳಾದರೇನು, ಒಂದು ದಿನ ತಾನೆ ಆವರೇನು ನೀನು ಅವರನಳಲ್ಲವೆ? ಅವರ ವಸ್ತುವನ್ನು ಅವರಿಷ್ಟದಂತೆ ಬಳಿಯಲ್ಲಿರಿಸಿಕೊಳ್ಳುವುವ ರಲ್ಲಿ ಆಶ್ಚರ್ಯವಿಲ್ಲ.......ಆದರೂ, ಹೌದು, ನೀನು ಅವರ ಆ ನಡತೆಯನ್ನು ವಿಚಿತ್ರವೆಂದು ತಿಳಿಯಲು ಕಾರಣ ವುಂಟು. ಒಬ್ಬ ಪುರುಷನು ತನ್ನ ನೂತನವಧುವನ್ನು ಮೊದಮೊದಲು ಸಂಧಿಸುವ ಗ-ಅವನದೆಷ್ಟು ನಾಗರೀಕ ನಾಗಿದ್ದರೇನು ಅಥವಾ, ಅವನ ಪತ್ನಿ ಅದೆಷ್ಟು ಅನಾಗ ರೀಕ(!) ಳಾಗಿದ್ದರೆ ತಾನೆ ಏನು– ಪತ್ನಿಯಲ್ಲಿರುವ ದೋಷಾದಿಗಳನ್ನು ಅಲ್ಲೇ ಎತ್ತಿ ತೋರಿಸಿದಾಗ ನವೀನ ನಾಗರೀಕವನ್ನು ತಿಳಿಯದಿರುವ ನಿನ್ನಂತಹ ಬಾಲಿಕೆ ಯರು ಗಾಬರಿಗೊಳ್ಳುವುದರಲ್ಲಿ ಅತಿಶಯವೇನು? ನನ್ನ ಶಾರದಾ, ನೀನು ಭಯಪಡಬೇಡ.

'ಏನು ಮಾಡಲತ್ತಿಗೆ' ಎಂದು ನನ್ನನ್ನು ಕೇಳುತ್ತಿ ರುವೆ. ನಾನು ನಿನಗೆ ಉಪಾಯವನ್ನು ಹೇಳುವೆನು. ನಿನ್ನ ಪತಿಯು ನಿನ್ನ ಬಳಿಗೆ ಬಂದಾಗ..........ನೀನು ಎಷ್ಟೇ ನಾಗರೀಕಳಾಗಿದ್ದರೂ ಎದ್ದು ನಿಲ್ಲಲು ಮರೆಯು ದಿರು ಕಂಡೆಯಾ? ನಾಗರೀಕಯುಗದಲ್ಲಿ ಧರ್ಮಾದಿಗ ಳಲ್ಲಿ ವಿಶ್ವಾಸವಿಲ್ಲದೆ ಹೋದರೂ, ವಯೋಮಾನವನ್ನು ಅದೆಂತು ಮರೆಯಲಾದೀತ?

ಅವರೇನಾದರೂ ನಿನ್ನನ್ನು ಪ್ರಶ್ನಿಸಿದಾಗ ನೀನು ಅವಶ್ಯವಾಗಿಯೂ ಅವರಿಗೆ ಹಿತವಾಗುವ ಮಾತುಗಳನ್ನು ಹೇಳಲು ಬಾಧ್ಯಳಾಗಿರುತ್ತೀ. ಧರ್ಮವಿರೋಧವಾದ ವಿಷಯಗಳ ಪ್ರಸ್ತಾಪವೇದು ನಿನಗೆ ತಿಳಿದು ಬಂದಾಗ ನಯವಾಗಿ ಅದನ್ನು ತಿಳಿಯ ಪಡಿಸು.... ......ಅರಸಿನ ಉಪಯೋಗಿಸಬಾರದೆಂದು ಹೇಳುವರೆಂದು ಬರೆದಿರುವಿ. ಆದರೆ, ಅದನ್ನೆಂದಿಗೂ ಹಚ್ಚದೆ ಇರಬೇಡ. ಅದರ ಗುಣಗಳು ನಿನಗೆ ತಿಳಿದೇ ಇವೆ. ಹಾಗೆ ಮಾಡಿದರೆ ಅವ ರಿಗೆ ಅಸಮಾಧಾನವುಂಟಾದೀತೆಂದು ನಿನಗೆ ತೋರಬ ಹುದು. ಅದಕ್ಕೊಂದು ಯುಕ್ತಿಯಿದೆ. ಸ್ನಾನಕ್ಕೆ ಮೊದಲು ಅರಸಿನವಿಂದ ಮೈತೊಳೆದು ಅನಂತರ ಅವರು ಕೊಡುತ್ತಿರುವ ಸಾಬೂನಿನಿಂದ ಮೈಉಜ್ಜಿಕೋ. ಆಗ ಅರಸಿನದ ಬಣ್ಣವು ಹೊರಟು ಹೋಗುವುದು. ನೀನು ಮಾಡಬೇಕಾದ ಕೆಲ ಕರ್ತವ್ಯಗಳಿವೆ.

1. ಇಂಗ್ಲೀಷನ್ನು ಸುಲಭದಲ್ಲಿ ಬೋಧಿಸುವ ಪುಸ್ತಕಗಳು ಹೇರಳವಾಗಿ ದೊರೆಯುತ್ತವೆ. ಅವುಗಳಲ್ಲಿ ಉತ್ತಮವಾದುದೊಂದನ್ನು ತರಿಸಿಕೊಂಡು ಓದಿ, ಕೆಲ ಮಂದರೂ ಇಂಗ್ಲೀಷು ಶಬ್ದಗಳನ್ನು ಕಲಿಯಲು ಪ್ರಯತ್ನ ಮಾಡು. ಹೆಂಗಸರಿಗೆ ಇಂಗ್ಲೀಷು ಇಲ್ಲವಿದ್ದರೆ ನಡೆಯದೆ? ಎಂದು ನೀನು ಚಿಂತಿಸಬಹುದು. ಅದು ಉಚಿತವಲ್ಲ. ಏಕೆಂದರೆ ಅದು ಅವಶ್ಯವಲ್ಲದಿದ್ದರೂಅದನ್ನು ಕಲಿಯುವ ದರಿಂದ ಹಾನಿಯೇನೂ ಇಲ್ಲ. ಅಲ್ಲದೆ, ನಿನ್ನ ಬಿ. ಎ. ಗಂಡನಿಗೆ ತೃಪ್ತಿಯೂ ಉಂಟಾಗಬಹುದು.

2. ಸ್ವಲ್ಪ ಇಂಗ್ಲೀಷಿನ ಪರಿಚಯ ಮಾಡಿ ಕೊಂಡ ಮೇಲೆ, ನಡುನಡುವೆ ಸಂಭಾಷಣೆಯಲ್ಲಿ ನಿನ್ನ ಗಂಡನಂತೆಯೇ ಆ ಶಬ್ದಗಳನ್ನುಪಯೋಗಿಸಲು ಕಲಿ. ನಿನ್ನ ಯಜಮಾನರಿಗೆ ನಿಶ್ಚಯವಾಗಿಯೂ ನಿನ್ನ ಬಾಯಿ ಯಿಂದ ಬರುವ ಆ ಶಬ್ದಗಳನ್ನು ಕೇಳಿ ಆನಂದವಾ ಯಿತು. ಅವರು ತೀರ ಇಂಗ್ಲೀಷಿನ ಅಭಿಮಾನಿಯೆಂದು ನಿನ್ನ ಪತ್ರದಿಂದ ತಿಳಿದುಬರತ್ತದೆ. ಅನಂತರ ನೀನು ಮೆಲ್ಲ ಮೆಲ್ಲ ತಾಯ್ನುಡಿಯ ಮೇಲ್ಮೆಯನ್ನವರಿಗೆ ತಿಳಿಯ ಪಡಿಸು. ವಿಷವನ್ನ ವಿಷದಿಂದಲೇ ಗೆಲ್ಲಬೇಕಂತೆ.

3. ವಿರಾಮವೇಳೆಗಳಲ್ಲಿ ನೈಷಧವೇ ಮೊದ ಲಾದ ಕಾವ್ಯಗಳನ್ನೋದಿ ಅವರಿಗೆ ಹೇಳುತ್ತಿರು. ಹಿಂದೂಸ್ತ್ರೀಯರ ನಡೆಯುಡಿಗಳ ವರ್ಣನೆಯನ್ನು ಅವರಿಗೆ ಮನದಟ್ಟಾಗುವಂತೆ ಮಾಡು.

4. ಅವರಿಷ್ಟದಂತೆ ಅವರೊಂದಿಗೆ ಪಾರ್ಕಿಗೆ ಹೋಗುವುದರಲ್ಲಿ ಆಕ್ಷೇಪಣೆಯೇನಿದೆ? ಅವರ ಜೊತೆ ಯಲ್ಲಿ ತಾನೆ ಹೋಗಲಿರುವೆ? ರಾಮನೊಂದಿಗೆ ಸೀತೆಯು ಕಾಡನ್ನೆಲ್ಲಾ ಸುತ್ತಲಿಲ್ಲವೆ? ಅದನ್ನು ತಿಳಿತಿಳಿದೂ ಅವ ರೊಂದಿಗೆ ಹೋಗಲು ನೀನು ಭಯಪಡಬೇಕಾದುದಿಲ್ಲ.

ಶಾರದ, ಈ ನಾಲ್ಕು ವಿಷಯಗಳ ಅನುಸರಣೆಯನ್ನು ಕೈಗೊಳ್ಳುವೆಯಾದರೆ, ನಿನ್ನನ್ನು ಯಾವ ವಿಷಯಕ್ಕೂ ನಿನ್ನ ಪತಿಯು ಬಲವಂತಪಡಿಸಲಾರರೆಂದು ದೃಢವಾಗಿ ನಂಬು. ಅನಂತರ ಅವರ ಯಾವ ಕ್ರಿಯೆಯೂ ನಿನಗೆ ಅತಿಶಯವಾಗಿ ಕಾಣಲಿಕ್ಕಿಲ್ಲ. ಪ್ರೀತಿಯಿಂದ ಕಳುಹಿಸು ತ್ತಿರುವ ಈ ನನ್ನ ಸಂದೇಶವು ವ್ಯರ್ಥವಾಗದೆಂದು ನಂಬಿ ರುವ

ನಿನ್ನ **ಸರೋಜ.**

ಬೆಂಗಳೂರು
1—4—'20

ಪ್ರಿಯ ಅತ್ತಿಗೆ,

ಅನೇಕ ದಿನಗಳ ಮೇಲೆ ಪತ್ರಬರೆದೆನೆಂದು ಬೇಸ

ರಿಸಬಾರದು. ಅವಕಾಶ ಕಾರಣವನ್ನು ತಿಳಿಸುವರೆ ನಾಚಿಕೆಯಾಗುತ್ತದೆ. ಅತ್ತಿಗೆ, ನನಗೆ ಸಮಯವೇ ಇಲ್ಲ ಕಂಡಿರಾ? ಎಷ್ಟೊತ್ತಿಗೂ ಅವರು... ಅತ್ತಿಗೆ, ಇಗೋ ಇದೀಗ ಅವರು ನನ್ನ ಬೆನ್ನ ಹಿಂದೆಯೇ ನಿಂತಿರುವುದರಿಂದ ಏನನ್ನೂ ಬರೆಯಲು ತೋಚದಾಗಿದೆ. ನಿಧಾನವಾಗಿ ಮುಂದೆ ಪತ್ರವನ್ನು ಬರೆಯುವೆನು. ಈಗಲೀಗ ಅವರ ವರ್ತನೆಯು ಆದೇಕೆ ಬದಲಾಯಿಸಿದೆಂಬುದನ್ನು ಅರಿಯಲಾರದವಳಾಗಿದ್ದೇನೆ ಒಂದು ನಿಮಿಷವೂ ನನಗಾಗಿ ಉಪಯೋಗಿಸಲಾರದಷ್ಟು ನಾನು ಅಸ್ವತಂತ್ರಳಾಗಿದ್ದೇನೆ. ಆದರೆ, ಈ ಸ್ಥಿತಿಯಲ್ಲಿ ನಾನದೆಂತಹ ಸ್ವರ್ಗೀಯ ಸೌಖ್ಯವನ್ನನುಭವಿಸುತ್ತಿರುವೆನೆಂದು, ಶುಭಸಂದೇಶವನ್ನು ಕಳುಹಿಸಿರುವ ನಿಮಗೆ ನಾನು ಬೇರೆ ಬರೆಯಬೇಕೆ?

ಪ್ರೀತಿಯಿರಲಿ.

ಇತಿ

ಶಾರದೆ.

---

ನನಗರಿಯದು-ನಿಮಗೆ



ಬೀಡಿ ಎಳೆದರೆ ಉದ್ದವಾಗುತ್ತದೆಯೇ?

## श्री प्रसाद ಶ್ರೀ ಪ್ರಸಾದ SRI PRASADA

ಸಮಗ್ರ ಭಾರತದಲ್ಲಿ ಅನೇಕ ವರ್ಷಗಳಿಂದ ಸಂಚರಿಸುತ್ತಲಿರುವ
ಮಂತ್ರವಿದ್ಯೆಯಲ್ಲಿ ಪಾರಂಗತರಾದ ತನ್ನ ಮಂತ್ರಶಕ್ತಿಯಿಂದ
ಅನೇಕ ಜನರಿಗೆ ಪ್ರಯೋಜನವನ್ನುಂಟುಮಾಡಿದ
ಯೋಗಿ ಮಹಾಶಯರೊಬ್ಬರ

# ಮಹಾಮಂತ್ರಶಕ್ತಿಯ ಪ್ರಸಾದ

ಈ ಪ್ರಸಾದಗಳ ಸೇವನೆಯಿಂದಲೂ, ಧಾರಣೆಯಿಂದಲೂ, ಪ್ರಯೋಗದಿಂದಲೂ ಅನೇಕರು ಅನೇಕ ವಿಧಗಳಿಂದ ಪ್ರಯೋಜನವನ್ನು ಹೊಂದಿರುವರು.

ಇಟ್ಟುಕೊಳ್ಳಲಾಗುವುದಿಲ.
ಮುಖತಃ ಭೇಟಿಯನ್ನು

**ಈ ಪ್ರಸಾದದಿಂದ**

*Personal interviews are prohibited.*

ಪರೀಕ್ಷೆಯಲ್ಲಿ ಪಾಸಾಗುವದು, ಶತ್ರುಗಳನ್ನು ಸ್ವಾಧೀನಪಡಿಸುವದು, ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದುವದು, ಮುಂತಾದ ಯಾವತ್ತು ಅಭೀಷ್ಟಗಳನ್ನು ಸಾಧಿಸಬಹುದು.

**ಒಂದು ತಿಂಗಳು ಉಪಯೋಗಿಸುವ ಪ್ರಸಾದಕ್ಕೆ ರೂಪಾಯಿ ಒಂದು.**

**ವಿಶೇಷತರದ ಪ್ರಸಾದಕ್ಕೆ ರೂಪಾಯಿ ಐದು.**

**ಪ್ರಸಾದ ಬೇಕಾದವರು** – ತಮ್ಮ ನಕ್ಷತ್ರ, ಯಾ ಜನನ ಸಮಯವನ್ನೂ ತಾರೀಕನ್ನೂ ತಿಳಿಸಬೇಕು. ಅವು ಗೊತ್ತಿಲ್ಲದಿದ್ದರೆ ಕಾಗದಬರೆಯುವ ಸ್ಥಳ, ಸಮಯಗಳನ್ನೂ ನಿರ್ದೇಶಿಸಬೇಕು.

**ವಿ. ಪಿ. ಕ್ರಮವಿಲ್ಲ**–ಹಣವನ್ನು ಮುಂಗಡವಾಗಿಯೇ ಕಳುಹಿಸಬೇಕು. ಹಣವನ್ನು ಕಳುಹಿಸದೆ ಬರುವ ಕಾಗದಗಳಿಗೆ ನಿಗಾ ಕೊಡಲಾರೆವು.

**ಪತ್ರವ್ಯವಹಾರ:**— ಇಂಗ್ಲಿಷ್, ಸಂಸ್ಕೃತ, ಯಾ ಕನ್ನಡ ಭಾಷೆಯಲ್ಲಿ ಮಾಡಬಹುದು.
ಎಲ್ಲ ಪತ್ರಗಳು ಗುಪ್ತವಾಗಿರಿಸಲಾಗುತ್ತವೆ.

C. C. No. 4.

**C/o. ANTARANGA, UDIPI.**

# ಈ ವಾರದ ಪಂಚಾಂಗ

ಬಹುಧಾನ್ಯ ಸಂ|ರದ ಮಾರ್ಗಶಿರ ಕೃಷ್ಣ–ಪೌಷ ಶುಕ್ಲಪಕ್ಷಃ ದಕ್ಷಿಣಾಯನಂ ಹೇಮಂತರ್ತುಃ

ಧನು ೩ರಿಂದ ಧನು ೯ರ ವರೆಗೆ. ಮಹಾನಕ್ಷತ್ರ ಮೂಲಾ. ದಶಂಬರ ೧೯೩೮

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 18 | ೧೨ | ರ೩೬\| | ಸ್ವಾ೩\|\|\| | ಸ್ಕ೫೮\|\| | ಕೌ೬ | ೧೮\| | ೪೩ | ಮೂ೨ರ೫೬ವೃಶ್ಚಿಕೆಚ೫೧\|ಜ್ಯೆ೨‡ [‡ವಬು೦ಪ್ರದೋಷಃದಗ್ಧಯೋ೧೨ |
| 19 | ೧೩ | ಚ೩೭\|\|\| | ವಿ೫\|\| | ಧೃ೪೮\|\|\| | ಗ೬\|\|\| | ೧೬\| | ೪೧\|\| | ಸ್ಪ್ರಗುದಯಂಬುಧಃ ಸೋಮಪ್ರ. |
| 20 | ೧೪ | ಕು೪೦\| | ಅನು೯ | ಶೂ೪೮ | ಭ೮\|\| | ೨೪\| | ೪೯\|\| | ವಿ೪ವೃಶ್ಚಿಕೆಶು೫೧ ಕೃಷ್ಣಾಂಗಾರ† [†೧೪ಮಾಸಶಿವರಾತ್ರಿಃ |
| 21 | ೩೦ | ಬು೪೩\|\|\| | ಜ್ಯೆ೧೩\|\| | ಗಂ೪೮ | ಚ೧೧\|\| | ೩೫\| | ೦ | ಧನುಚ೧೩\|\|ಸ್ವಾ೩ಕು೪೦ ● ಎಳ್ಳ§ |
| 22 | ೧ | ಗು೪೮\| | ಮೂ೧೮\|\|\| | ವೃ೪೮\|\|\| | ಕಿಂ೧೬ | ೪೫\| | ೧\| | ಮೂ೩ರ೧೨ ಬುಧವಕ್ರತ್ಯಾ. ಸಾ.§ |
| 23 | ೨ | ಶು೫೩\|\| | ಪೂಷ೨೫ | ಧ್ರು೪೯\|\|\| | ಬಾ೨೧ | ೪೭\| | ೧೧\|\| | ಮಕರೆಚ೪೧\|\| ಚಂದ್ರದರ್ಶನಂ [§ಮಾವಾಸ್ಯಾ |
| 24 | ೩ | ಶ೫೮\|\|\| | ಉಷ೩೧\| | ವ್ಯಾ೫೧ | ತೈ೨೬\| | ೪೨\|\| | ೧೩\|\| | [§ಮಕರ ಸಂ |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 18 | ೧೨ | ರ೨೯\|\|\| | ವಿ೬೦ | ಸ್ಕ೪೪\|\| | ತೈ೨೯\|\|\| | ೧೧\| | ೩೬\|\|\| | ಮೂ೨ರ೫೨ವೃಶ್ಚಿಕೆಚ೪೪\|ಜ್ಯೆ೨ ‡ |
| 19 | ೧೩ | ಚ೩೩ | ವಿ\| | ಧೃ೪೪\|\| | ಗ೧\| | ೧೧ | ೩೭ | ಸೋಮಪ್ರದೋಷಃ |
| 20 | ೧೪ | ಕು೩೭\| | ಅನು೫\| | ಶೂ೪೫ | ಭ೫ | ೨೦\|\| | ೪೬\|\|\| | [‡ವಬು೪೩ ಜ್ಯೋದಯಃಪೂರ್ವೆ [iರಾಯಣಾರಂಭಃ |
| 21 | ೩೦ | ಬು೪೨\| | ಜ್ಯೆ೧೧ | ಗಂ೪೬ | ಚ೯\|\|\| | ೩೩\| | ೫೯\|\|\| | ಚಾಪೆಚ೧೧ ● ಅಮಾವಾಸ್ಯಾ [†ನ೨೪ ಶಿಶಿರೆತಪರಂಭಃ ಉತ್ತi |
| 22 | ೧ | ಗು೪೭\|\|\| | ಮೂ೧೭\|\| | ವೃ೪೭\|\| | ಕಿಂ೧೫ | ೪೪\| | ಶೆ.೪\| | ಮೂ೩ರ೪ ಸ್ವಾ೩ಕು೨ ಮಕರಾಯ† |
| 23 | ೨ | ಶು೫೩\|\|\| | ಪೂಷಾ೨೯\|\| | ಧ್ರು೪೯\|\| | ಬಾ೨೦\|\|\| | ೪೬\|\|\| | ೧೧ | ಮಕರೆಚ೪೧\| ಚಂದ್ರದರ್ಶನಂ |
| 24 | ೩ | ಶ೬೦ | ಉಷಾ೩೧\|\|\| | ವ್ಯಾ೫೧\|\| | ತೈ೨೬\|\|\| | ೪೩ | ೧೩\|\|\| | ವೃಶ್ಚಿಕೆಶುಕ್ರ೬೦ ಜಿಲ್ಲಾಯದ್ |

# ಈ ವಾರದಲ್ಲಿ

# ನಿಮ್ಮ ಭವಿಷ್ಯವು ಹೇಗಿದೆ?

(ತಾ. ೧೮-೧೨-'೩೮ರಿಂದ
ತಾ. ೨೪-೧೨-'೩೮ರ ವರೆಗೆ.)

**ಮೇಷ:—**

ಜನರು ನಿಶ್ಚಿಂತರಾಗಿಯೂ, ನಿರೋಗಿಗಳಾಗಿಯೂ ಇರಬೇಕಾದರೆ ಅವರವರ ವಯೋಮಾನವನ್ನನುಸರಿಸಿ ತಕ್ಕಷ್ಟು ನಿದ್ರೆಯೂ ಅತ್ಯಾವಶ್ಯಕ. ಈ ನಿದ್ರೆಯು ಸರಿಯಾಗಿ ಬಾರದಿರಲು ಅನೇಕ ಕಾರಣಗಳಿವೆ. ಅವುಗಳಲ್ಲಿ ಕೆಲವಿವು. "ಅಭಿಯುಕ್ತಂ ಬಲವತಾ ದುರ್ಬಲಂ ಹೀನಸಾಧನಂ। ಹೃತಸ್ವಂ ಕಾಮಿನಂ ಚೋರಂ ಆವಿಶಂತಿ ಪ್ರಜಾಗರಾ:" ತನಗಿಂತಲೂ ಬಲಿಷ್ಠನಾದ ಶತ್ರುವಿನಿಂದ ಪರಾಜಿತನಾದವನಿಗೂ ಕಳ್ಳಕಾಕರಿಂದ ಧನವು ಅಪಹರಿಸಲ್ಪಟ್ಟರೂ, ಕಾಮುಕನಿಗೂ, ಕಳ್ಳರಿಗೂ ನಿದ್ದೆಯು ಸರಿಯಾಗಿ ಬರಲೊಲ್ಲದು. ನಿಮಗೂ ಕೂಡಾ ಶತ್ರುಪರಾಭವದಿಂದಲೂ, ಅಂಗನಾಚಿಂತೆಯಿಂದಲೂ ನಿದ್ರಾಂಗನೆಯು ನಿಮ್ಮನ್ನಗಲುವಳು. ಆದ್ದರಿಂದ ತೇಜೋಹೀನರಾದ ನಿಮಗೆ ವ್ಯಸನವೂ ರೋಗ ಪೀಡೆಯೂ ಅಧಿಕವಾಗುವುದು. ಲೇವಾದೇವಿ ಸಂಬಂಧವಾಗಿ ಕಲಹವಾಗುವುದು. ಸ್ತ್ರೀ ಪೀಡೆಯೂ, ತತ್ಸಂಬಂಧವಾದ ಅನಿಷ್ಟಗಳೂ ಹೆಚ್ಚುವವು. ವಾರದ ಆದ್ಯಂತ ದಿನಗಳ ಮಟ್ಟಿಗೆ ಕೆಲವೊಂದು ಕಾರ್ಯಗಳಲ್ಲಿ ಜಯವೂ ಧನ ಲಾಭವೂ ಆಗುವುದು.

**ವೃಷಭ:—**

"ಪ್ರಸಾದೋ ನಿಷ್ಫಲೋ ಯಸ್ಯ ಕ್ರೋಧಶ್ಚಾಪಿ ನಿರರ್ಥಕಃ। ನತಂ ಭರ್ತಾರಮಿಚ್ಛಂತಿ ಷಂಡಂ ಪತಿಮಿವ ಸ್ತ್ರೀಯಃ" ಯಾವಾತನ ನಿಗ್ರಹವೂ ಅನುಗ್ರಹವೂ ಕೂಡ ನಿಷ್ಫಲವಾದವುಗಳೋ ಅಂತಹ ಮನುಷ್ಯನನ್ನು, ನಪುಂಸಕನಾದ ಪತಿಯನ್ನು ಸ್ತ್ರೀಯರು ಹೇಗೆ ಅಪೇಕ್ಷೆ ಮಾಡರೋ ಅಂತೆಯೇ ಜನರೂ ಕೂಡ ನಿರ್ಲಕ್ಷ್ಯ ಭಾವದಿಂದ ನೋಡುವರು. ಆದಕಾರಣ ಅನುಗ್ರಹಕ್ಕೆ ತಕ್ಕ ಪ್ರತಿಫಲ, ನಿಗ್ರಹಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಮಾಡುವ ಶಕ್ತಿಯಿದ್ದರೇನೇ ಅವರು ಮನುಷ್ಯಕೋಟಿಯಲ್ಲಿ ಗಣಿಸಲ್ಪಡುವರು. ಈ ತೆರನಾದ ಶಕ್ತಿಯು ನಿಮ್ಮಲ್ಲಿ ಸಾಕಷ್ಟಿರುವುದರಿಂದ ಜನರಿಂದ ಗೌರವವನ್ನು ಪಡೆಯುವಿರಿ. ಶತ್ರುಗಳೂ ಕೂಡ ನಿಮಗೆ ತಲೆಬಾಗುವರು. ನಿಮ್ಮ ಉದ್ಯೋಗದಲ್ಲಿ ಲಾಭವು ತೃಪ್ತಿಕರವಿರುವುದರಿಂದ ಸಾಂಪತ್ತಿಕ ಸ್ಥಿತಿಯು ಬಹಳ ಸುಧಾರಿಸಿರುವುದು. ಆರೋಗ್ಯದ ಮಟ್ಟಿಗೆ ಈ ವಾರವು ಒಳ್ಳೆಯದಿಲ್ಲವು. ಜನಸಾಮಾನ್ಯರಲ್ಲಿ ವಿಶೇಷತಃ ಸ್ವಸ್ತ್ರೀಯೊಡನೆ ಕಲಹವಾಗುವದು. ತಾ. ೧೮ರಿಂದ ೨೧ರ ವರೆಗಿನ ದಿನಗಳು ಹೆಚ್ಚಿನಂಶ ಉತ್ತಮಗಳಾಗಿವೆ.

**ಮಿಥುನ:—**

ದೇಹವೆಂಬ ರಥಕ್ಕೆ ಇಂದ್ರಿಯಗಳೆಂಬವು ಕುದುರೆಗಳು. ಈ ಕುದುರೆಗಳ ಕಡಿವಾಣವು ಮನಸ್ಸು. ಇದು ಬುದ್ಧಿಯೆಂಬ ಸಾರಥಿಯ ವಶವಲ್ಲಿರುವುದು. ಈ ಕುದುರೆಯನ್ನು ಸನ್ಮಾರ್ಗದಲ್ಲಿ ಯಾ ದುರ್ಮಾರ್ಗದಲ್ಲಿ ಓಡುವಂತೆ ಮಾಡುವ ಶಕ್ತಿಯು ಈ ಸಾರಥಿಯಲ್ಲಿರುವುದು. ಈ ಸಾರಥಿಯ ದೌರ್ಬಲ್ಯದಿಂದಾಗಿ ಕುದುರೆಯು ಸಿಕ್ಕ ಕಡೆ ಹೋಗಿ ರಥರೂಪರಾಗಿರುವ ನಿಮ್ಮ ದೇಹಕ್ಕೆ ಯಾ ರಥಿಕರೂಪರಾದ ನಿಮಗೆ ಹೆಚ್ಚಿನ ಕೆಡುಕುಗಳಾಗುವವು. ವಿರೋಧಿಗಳ ಉಪಟಳಕ್ಕೂ ರೋಗಬಾಧೆಗೂ ಸಿಲುಕಿ ಹೆಚ್ಚು ಧನವ್ಯಯವಾಗುವುದು. ವಿದ್ಯಾರ್ಥಿಗಳಿಗೂ ವಿದ್ಯೋಪಜೀವಿಗಳಿಗೂ ಕೂಡ ಈ ವಾರವು ಬಹಳ ಹಾನಿಕರವಾಗಿರುವುದು. ಅನೇಕ ರೀತಿಯಿಂದ ಧನವ್ಯಯವಾಗುವುದರಿಂದ ಹಣದ ಅಡಚಣೆ ಬಹಳ ಹೆಚ್ಚುವುದು. ಆದರೂ ನಿಮಗೆ ಬಂಧುಗಳು ಮತ್ತು ಮಿತ್ರರ ಬೆಂಬಲವಿರುವುದರಿಂದ ನಿಮಗೀ ವಾರವು ಅಷ್ಟೊಂದು ಕಷ್ಟಕರವಾಗಲಾರದು. ತಾ. ೧೯ರಿಂದ ೨೩ರ ವರೆಗೆ ಚಂದ್ರಬಲವಿರುವುದರಿಂದ ಈ ಪೂರ್ವೋಕ್ತದೋಷಗಳು ತದ್ದಿನಗಳಲ್ಲಿ ಹೆಚ್ಚಿಗೆ ಪೀಡಿಸಲಾರವು.

**ಕರ್ಕಾಟಕ:—**

ಷಡ್ವೈರಿಗಳಲ್ಲೊಂದಾದ ಅಸೂಯೆಯು ನಿಮ್ಮನ್ನು ಬಹಳ ಸಮಯದಿಂದ ಆವರಿಸಿಕೊಂಡಿರುವುದು. ಇದ

ರಿಂದ ನಿಮಗೆ ಅನೇಕರಲ್ಲಿ ವಿರೋಧವುಂಟಾಗಿರುವುದಲ್ಲದೆ ಕೆಲವೊಮ್ಮೆ ಬಂಧನದಲ್ಲಿದ್ದಂತೆ ನೀವು ಕಾಲಯಾಪನೆ ಮಾಡಿರುವಿರಿ. ಆದರೂ ಪ್ರಕೃತ ನಿಮ್ಮ ಶೋಕವು ನಿವೃತ್ತಿಯಾಗಿ, ಅನೇಕ ಶತ್ರುಗಳೂ ಕೂಡ ತಮ್ಮ ವಿರೋಧ ಭಾವವನ್ನು ಬಿಟ್ಟು ಮಿತ್ರರಾಗಿರುವರು. ಆದ ಕಾರಣದಿಂದಲೇ ಅದೊಂದು ಅಪೂರ್ವವಾದ ಕಾರ್ಯೋತ್ಸಾಹವು ನಿಮ್ಮಲ್ಲಿ ಹುಟ್ಟಿರುವುದು. ಸಾಂಸಾರಿಕರಾದ ನಿಮಗೆ ಗೃಹದಲ್ಲಿ ಸುಖವಿಲ್ಲವು. ಪುತ್ರಪತ್ನಿಯರಿಂದಾಗತಕ್ಕ ಕಲಹವು ನಿಮ್ಮನ್ನು ಬಹಳ ದುಃಖಕ್ಕೀಡು ಮಾಡುವದು. ಹಣದ ತಾಪತ್ರಯಕ್ಕೆ ಸಿಲುಕುವಿರಿ. ವಾರದ ಆದ್ಯರ್ಧ ಭಾಗದಲ್ಲಿ ಕಾರ್ಯಹಾನಿ, ಮಾರ್ಗಾಯಾಸಗಳು ಅಧಿಕವಾದರೂ ಮುಂದಿನ ದಿನಗಳಲ್ಲಿ ಇವು ಬಹಳ ಕಡಿಮೆಯಾಗುವವು.

**ಸಿಂಹ:—**

ಬಹ್ವಂಶಗಳಲ್ಲಿ ಈ ವಾರವು ನಿಮಗೆ ಉತ್ತಮವಾಗಿರುವುದು. ನಿಮ್ಮ ಮನೋರಥಗಳೆಲ್ಲವೂ ಹೆಚ್ಚಾಗಿ ಕಾರ್ಯರೂಪದಲ್ಲಿ ಪರಿಣಮಿಸುವವು. ಸರ್ವ ಕಾರ್ಯಗಳಲ್ಲೂ ವ್ಯಾಪಾರಾದಿಗಳಲ್ಲೂ ಧನಾಗಮವು ಯಥೇಷ್ಟವಾಗಿರುವುದರಿಂದ ಯಾವಾಗಲೂ ಕೈಯಲ್ಲಿ ಕಾಸು ತಪ್ಪದು. ಸ್ವಕೀಯ ಜನರೂ ಕುಟುಂಬವೂ ಅಭಿವೃದ್ಧಿಯನ್ನೈದುವುದು. ಶತ್ರುಗಳು ನಾಮಾವಶೇಷರಾಗುವರು. ನಿಮ್ಮ ಮಾತನ್ನು ಸರ್ವರೂ ಮನ್ನಿಸುವರು. ಕೆಲವು ಮಾತಿನಿಂದಲೇ ಜನರನ್ನು ವಶೀಕರಿಸುವ ಶಕ್ತಿಯು ನಿಮ್ಮಲ್ಲಿರುವುದರಿಂದ ನಿಮ್ಮ ಮಿತ್ರವೃಂದವು ವೃದ್ಧಿಯನ್ನೈದುವುದು. ಇಷ್ಟಿದ್ದರೂ ನಿಮಗೆ ಆರೋಗ್ಯಭಾಗ್ಯವೊಂದಿಲ್ಲದುದರಿಂದ ಎಲ್ಲವೂ ನಿಷ್ಫಲವೆಂದೇ ಕಾಣಬಹುದು. ವಾರದ ಆದ್ಯಂತ ಭಾಗಗಳು ಎಲ್ಲಾ ವಿಧಗಳಲ್ಲಿಯೂ ಉತ್ತಮಗಳಾಗಿವೆ.

**ಕನ್ಯಾ:—**

ನಿಮ್ಮ ರಾಶಿಗೆ ಬುಧ ಹೊರತಾಗಿ ಸಮಸ್ತ ಗ್ರಹರೂ ಪ್ರತಿಕೂಲಸ್ಥಾನದಲ್ಲಿರುವುದರಿಂದ ಈ ವಾರವಲ್ಲಿ ವಿಶೇಷ ಅಶುಭಗಳು ಸಂಭವಿಸಲಿವೆ. ಶತ್ರುಗಳಿಂದಲೂ ರಾಜಕೀಯ ಅಧಿಕಾರಿಗಳಿಂದಲೂ ಕೂಡ ಮಾನಹಾನಿಯು ಸಂಭವ ಬಂದೀತು. ಹಣದ ಅಡಚಣೆ ವಿಶೇಷತಃ ಸಂಭವಿಸದಿದ್ದರೂ ಮನೋರೋಗವು ವಿಶೇಷವಾಗಿ ಪೀಡಿಸುವದು. ಪಿತ್ಥವಿಕಾರದ ರೋಗಗಳೂ ತಲೆದೋರುವವು. ನಿಂತಲ್ಲಿ ನಿಲ್ಲದೆ ವೃಥಾ ಅಲೆದಾಡುವಿರಿ. ನಿಮ್ಮ ಕಾರ್ಯಗಳಿಗೆ ಸಂಭವಿಸತಕ್ಕ ವಿಘ್ನಗಳು ವಿಶೇಷವಾಗಿ ಕಾರ್ಯನಾಶಕ್ಕೆ ಕಾರಣವಾಗುವವಲ್ಲದೆ ಆಪ್ತೇಷ್ಟರೊಡನೆಯೂ ಕಲಹವಾಗುವುದು. ಬುಧ ಚಂದ್ರರ ಅನುಗ್ರಹದಿಂದಾಗಿ ತಾ. ೧೯, ೨೦, ೨೧ರಲ್ಲಿ ಧನಲಾಭವೂ ಕಾರ್ಯದಲ್ಲಿ ಜಯಪ್ರಾಪ್ತಿಯೂ ಆಗುವುದು.

**ತುಲಾ:—**

"ಜೀವನ್ನರೋ ಭದ್ರಶತಾನಿ ಪಶ್ಯೇತ್" ಎಂದರೆ ಜೀವಿಸಿಕೊಂಡಿರತಕ್ಕ ಪುರುಷನು ಒಂದಲ್ಲ ಒಂದು ಕಾಲದಲ್ಲಾದರೂ ಮಂಗಳಗಳನ್ನು ನೋಡಿಯೇ ನೋಡುವನು. ಇಹಲೋಕವನ್ನು ತ್ಯಜಿಸಿದ ಮೇಲೆ ಏನಾಗುವುದೆಂದು ಹೇಳಲು ಸಾಧ್ಯವಲ್ಲವು. ಆದಕಾರಣ ಹೇಗಾದರೂ ಮಾಡಿ ಅನೇಕ ಗಂಡಾಂತರಗಳು ಬಂದೊದಗಿದರೂ ಕೂಡ ಅವುಗಳಿಂದ ಆತ್ಮನನ್ನು ರಕ್ಷಿಸಬೇಕು. ಪ್ರಕೃತದಲ್ಲಿ ನಿಮ್ಮ ಶರೀರಕ್ಕೆ ಅಕಸ್ಮಾತ್ ಉಂಟಾಗತಕ್ಕ ಸಂಘಟನೆಯಿಂದ ಬಹಳ ಹಾನಿಯಿದೆ. ವಾಹನಾದಿಗಳ ಯಾನದಲ್ಲಾಗಲಿ ಇತರ ಅನೇಕ ಪ್ರಕಾರಗಳಲ್ಲಿ ಶರೀರಕ್ಕೆ ಘಾತವುಂಟಾದೀತು. ಅವುಗಳಿಂದ ಪಾರಾಗಬೇಕಾದರೆ ಪ್ರತಿಯೊಂದು ಸಂದರ್ಭದಲ್ಲೂ ಬಹಳ ಜಾಗ್ರತೆಯಿಂದ ವರ್ತಿಸಬೇಕು. ಇತರ ಸಮಸ್ತ ಭಾಗಗಳೂ ಮಿಕ್ಕುಳಿದ ರಾಶಿಯವರಿಗಿಂತ ನಿಮ್ಮ ವಿಷಯದಲ್ಲಿ ಬಹಳ ಚೆನ್ನಾಗಿವೆ. ಆರ್ಥಿಕ ಪರಿಸ್ಥಿತಿಯು ಉತ್ತಮಸ್ಥಿತಿಗೆ ಬರುವುದು. ಒಂದಲ್ಲೊಂದು ಉದ್ಯೋಗದಲ್ಲಿ ನೀವು ನಿರತರಿರುವಿರಿ. ಆರೋಗ್ಯವೂ ಮಾನಸಿಕ ಸುಖವೂ ಚೆನ್ನಾಗಿಹುದು. ತಾ. ೧೯, ೨೦ ೨೧ ಮತ್ತು ೨೪ ಈ ದಿನಗಳು ಹೆಚ್ಚಿನ ಉತ್ತಮವಿಲ್ಲವು.

**ವೃಶ್ಚಿಕ:—**

ನಿಮಗೀ ವಾರದಲ್ಲಿ ಇಷ್ಟಕ್ಕಿಂತ ದ್ವಿಗುಣಿತವಾಗಿ ಅನಿಷ್ಟಗಳು ಸಂಭವಿಸುವವು. ವಿಶ್ವಾದಿ ಪರಿವಾರಗಳಿಂದ ಕೂಡಿದ ನಿಮ್ಮ ಗೃಹಸಂಪತ್ತು ಸಂಪೂರ್ಣವಾಗಿರುವದು. ದೈನಿಕ ಆಯುವ್ಯಯಗಳು ಸಮಾನವಾಗಿರುವವು. ಆದರೆ ದುರ್ವಾಕ್ಯಗಳು ಮತ್ತು ಕೃಪಣತನವು ಇವುಗಳಿಂದಾಗಿ ಹಲವರು ನಿಮಗೆ ವಿರೋಧಿಗಳಾದಾರು. ಸ್ತ್ರೀ ಜನರೊಡನೆ ಕಲಹವಾಗುವುದು. ಪಿತ್ಥ

ರೋಗ ನೇತ್ರರೋಗಗಳು ನಿಮ್ಮ ಆರೋಗ್ಯವನ್ನು ಕೆಡಿಸುವವು. ಇತ್ಯಾದಿ ಅನರ್ಥ ಶತಗಳಿಗೊಳಗಾದ ನಿಮಗೆ ಖರ್ಚಿನ ಭಾಗಗಳು ಹೆಚ್ಚಿ ಮರ್ಯಾದೆಯನ್ನು ಕಾಪಾಡಿಕೊಳ್ಳುವುದು ಬಹಳ ಕಷ್ಟಕ್ಕೆ ಗುರಿಯಾಗುವದು ತಾ. ೧೮ ಮತ್ತು ೨೨, ೨೩ ಈ ದಿನಗಳಲ್ಲಿ ಧನಮಾನಗಳಿಗೆ ಹಾನಿ, ಕಾರ್ಯನಾಶ.

**ಧನು:—**

ಮನುಷ್ಯನ ಜೀವಿತವು ಸುಖಮಯವಾಗಿರಬೇಕಾದರೆ ಈ ಆರು ವಿಷಯಗಳು ಆತನಿಗಿರಬೇಕು. ಅರ್ಥಾಗಮೋ ನಿತ್ಯಮರೋಗಿತಾ ಚ ಪ್ರಿಯಾಚ ಭಾರ್ಯಾ ಪ್ರಿಯವಾದಿನೀ ಚ। ವಶ್ಯಶ್ಚ ಪುತ್ರೋರ್ಥಕರೀ ಚ ವಿದ್ಯಾಷಡ್ ಜೀವಲೋಕಸ್ಯ ಸುಖಾನಿ ರಾಜನ್"।, ೧ ಸಂಪತ್ತು, ೨ ಆರೋಗ್ಯ, ೩ ಪ್ರೀತಿಪಾತ್ರಳಾದ ಪತ್ನಿ; ೪ ಇಷ್ಟವನ್ನು ನುಡಿಯತಕ್ಕಪುತ್ರಿ, ೫ ಮಾತನ್ನು ಕೇಳತಕ್ಕ ಮಗ, ೬ ಧನದಾಯಕವಾದ ವಿದ್ಯೆ. ಇವುಗಳು ಯಾವಾತನಿಗಿರುವವೋ ಆತನು ತನ್ನ ಜೀವಮಾನವನ್ನು ಬಹಳ ಸುಖದಿಂದ ಕಳೆವನು. ನಿಮಗೆ ಇವುಗಳಲ್ಲಿ ೧. ೩. ೫. ೬. ಪ್ರಕೃತದಲ್ಲಿ ಸರಿಯಾಗಿರ ಬಹುದು. ಆದ್ದರಿಂದಲೇ ನಿಮಗೆ ಹೆಚ್ಚಿನಂಶ ಅನುಕೂಲವಿಹುದು. ಉದರರೋಗಾದಿ ಅಂಗಕ್ಲೇಶಗಳು ತೋರಿಬರುವವು. ದುರ್ಮಾರ್ಗಪ್ರವೃತ್ತವಾದ ನಿಮ್ಮ ಮನಸ್ಸಿನಿಂದಾಗಿ ಅನೇಕ ತಡವೆ ಕಾರ್ಯಕ್ಕೆ ಹಾನಿಯೊದಗೀತು. ತಾ. ೧೮. ೨೨. ೨೩. ಈ ದಿನಗಳು ಚೆನ್ನಾಗಿವೆ.

**ಮಕರ:—**

ಸಿರಿಯು ಹೇಗೆ ಚಂಚಲಳೋ ಅಂತೆಯೇ ಸುಖದುಃಖಗಳೂ ಕೂಡ ಬಹಳ ಚಂಚಲಗಳು. ಒಂದೊಮ್ಮೆ ತುಂಬಾ ಸಂತೋಷದಲ್ಲಿದ್ದ ನರನು ಮರುಕ್ಷಣದಲ್ಲೇ ವಿಶೇಷವಾದ ಚಿಂತೆಗೆ ಪಾತ್ರನಾದಾನು. ವಿಶೇಷ ಚಿಂತೆಯಿಂದ ಕಾತರನಾದವನು ತತ್ಕ್ಷಣದಲ್ಲೇ ಚಿಂತಾಮುಕ್ತನಾಗಿ ಸುಖಿಯಾಗುವನು. ಪ್ರಕೃತ ನಿಮ್ಮ ಪರಿಸ್ಥಿತಿಯು ಈ ರೀತಿಯಲ್ಲಿ ಬಂದು ನಿಂತಿದೆ. ಕಳೆದ ವಾರದ ನಿಮ್ಮ ಅನುಭವಕ್ಕೂ ಈ ವಾರದ್ದಕ್ಕೂ ಅಜಗಜಾಂತರವಿಹುದು. ಆಯಕ್ಕಿಂತ ವ್ಯಯವು ವಿಶೇಷ ಅಧಿಕವಾಗುವುದು. ಅನೇಕ ಕಾರ್ಯಗಳಲ್ಲಿ ನಷ್ಟವಾಗುವುದು. ಮಾರ್ಗದಲ್ಲಿ ನಾನಾ ಪೀಡೆಗಳಿಗೊಳಗಾಗುವಿರಿ. ಆರೋಗ್ಯವು ಕೆಟ್ಟು ಹೋಗುವುದು. ವ್ಯವಹಾರದಲ್ಲಿ ಕಲಹವು ಹೆಚ್ಚುವುದು. ಆದರೆ ಸದಾಚಾರಸಂಪನ್ನರಿಗೆ ಗೃಹದಲ್ಲಿ ಚೆನ್ನಾಗಿದ್ದು ಶತ್ರುಪೀಡೆಯು ನಿವೃತ್ತಿಯಾಗುವುದು. ತಾ. ೧೮ ರಿಂದ ೨೧ರ ವರೆಗಿನ ದಿನಗಳು ಸ್ವಲ್ಪ ಮಟ್ಟಿಗೆ ಉತ್ತಮವಿವೆ.

**ಕುಂಭ:—**

ಇಷ್ಟಾರಿಷ್ಟರಾದ ಗ್ರಹರು ಸಮಾನ ಬಲವುಳ್ಳವರಿರುವುದರಿಂದಲೂ, ವಿಶೇಷ ವ್ಯತ್ಯಯಹೊಂದದಿರುವುದರಿಂದಲೂ ನಿಮ್ಮ ಭಾಗಕ್ಕೆ ಈ ವಾರವು ಉದಾಶೀನ ಭಾವವನ್ನು ತಾಳಿರುವುದು. ಸ್ನಾನಮಾನಗಳಿಗೂ ಧನಲಾಭಕ್ಕೂ ಏನೂ ಹಾನಿಯಿಲ್ಲವು. ಗೃಹಸ್ಥಧರ್ಮಾವಲಂಬಿಗಳಿಗೆ ವನಿತಾಸುಖ ದೊರೆವುದು. ಆದರೂ ದೇಹಾಲಸ್ಯವು ತಪ್ಪಿರುವುದಿಲ್ಲ. ಮನಸ್ಸು ಸದಾ ಭಯಗ್ರಸ್ತವಾಗಿರುವುದು. ಒಂದು ಭಾಗದಲ್ಲಿ ಹೆಚ್ಚಿನ ಉತ್ಪತ್ತಿಯಿದ್ದರೆ ಇನ್ನೊಂದೆಡೆ ಅಷ್ಟೇ ಖರ್ಚಿರುವುದು. ಅಂತೂ ಆಯವ್ಯಯಗಳು ಸಮಾನವಾಗಿರುವವು. ತಾ. ೧೯ರಿಂದ ೨೩ರ ವರೆಗಿನ ದಿನಗಳಲ್ಲಿ ಇಷ್ಟಸಿದ್ಧಿ, ಮಿತ್ರಪ್ರಾಪ್ತಿ, ಸಂತೋಷ.

**ಮೀನ: –**

ನಿಮ್ಮ ಇಷ್ಟಾರ್ಥವು ನೆರವೇರಿ ತತ್ಸಂಬಂಧವಾದ ಲಾಭಕ್ಕೆ ಪಾತ್ರರಾಗುವಿರಿ. ಕೌಟುಂಬಿಕ ಜೀವನವು ಸುಖಮಯವಾಗಿರುವುದು. ಆದರೆ ಧನವ್ಯಯವು ಮಿತಿ ಮೀರುವುದರಿಂದಲೂ, ಮಾರ್ಗಾತಿಕ್ರಮಣದಲ್ಲಿ ವಿಶೇಷ ಶ್ರಮವನ್ನು ಹೊಂದುವುದರಿಂದಲೂ ಮನೋವ್ಯಥೆಯು ಮತ್ತಷ್ಟು ಹೆಚ್ಚುವುದು. ವಿಷವಹ್ನಿಗಳಿಂದ ಅಪಾಯ ಸಂಭವಿಸೀತು. ಶತ್ರುಗಳಿಂದಾಗಿ ಮಾನಕ್ಕೆ ಹಾನಿಯಾಗುವುದು. ಪ್ರತಿಯೊಂದು ಕಾರ್ಯಕ್ಕೂ ವಿಘ್ನಗಳು ಮುಂದಾಗಿ ಬರುವವು. ಆದರೆ ಅವುಗಳನ್ನು ನಿವಾರಿಸಲು ನೀವು ಶಕ್ತರಿರುವಿರಿ. ವಾರಾದ್ಯರ್ಧದಲ್ಲಿ ರಾಜಭಯ, ಶ್ರಮ, ಅಪಮೃತ್ಯು ಮೊದಲಾದ್ಯನಿಷ್ಟಗಳು ಕಂಡು ಬಂದರೂ ಮಿಕ್ಕುಳಿದ ದಿನಗಳು ಇಷ್ಟಸಿದ್ಧಿಕಾರಿಗಳಾಗಿವೆ.

—ಬಾಲಭಾಸ್ಕರ.

## ಮಂಗಳ ಗ್ರಹವು ಭೂಮಿಗೆ ಬಂದಾಗ- -

(೭ನೆ ಪುಟದಿಂದ)

ಡೆಗೆ ಬಂದೇ ಬಂದಿತು. ಮೆಶಿನ್ ಗನ್ನಿನ ಒಂದು ಗುಂಡು ಪ್ರಾಣಿಯೊಂದರ ಮುಖದೊಳಗೆ ಪ್ರವೇಶಿಸಿತು. ಚರ್ಮವು ಹರಿದು ಚೂರಾಗಿ ಕೆಂಪು "ಲೋಳೆಮಾಂಸ"ವು ಝಗಝಗನೆ ಹೊಳೆಯುತ್ತಿತ್ತು.

* * *

### ಕಟ್ಟಡಗಳು ಪುಡಿ ಪುಡಿ!

"ಹೊಡಿ" ಯೆಂಬ ಶಬ್ದವು ಕೇಳಿಸಿತು. ಆ ಭಯಂಕರ ಗುಂಡಿನೇಟಿಗೆ ಪರ್ವತಾಕಾರದ ಆ ರಾಕ್ಷಸ ಪ್ರಾಣಿಯು ವಾಲಿಕೊಂಡಿತು; ಆದರೆ ಬೀಳಲಿಲ್ಲ. ಕಬ್ಬಿಣದ ದೇಹದೊಳಗಿದ್ದ ಆ ಶಕ್ತಿಯು ನಿರ್ನಾಮವಾಯಿತು. ಅದರ ರುಂಡವು ಹರಿದು ಚೂರು ಮಾಡಲ್ಪಟ್ಟು ದಿಗ್ದಿಸೆಗಳಿಗೆಸೆಯಲ್ಪಟ್ಟಿತು. ಆ ಭಯಂಕರ ಪ್ರಾಣಿಯು ಯಂತ್ರ ಯುಗದ ಮಹಾಚಾತುರ್ಯದ ಪರಿಣಾಮವೆಂದು ನಮಗನಿಸಿತು. ನಾಶಕ್ಕಾಗಿ ರಚಿಸಲ್ಪಟ್ಟ ಯಂತ್ರವೆಂದು ಸ್ಪಷ್ಟವಾಯಿತು. ರುಂಡವು ಚೂರು ಚೂರಾಗಿದ್ದರೂ ಆ "ದೇಹ"ವು ನೇರವಾಗಿ ಮುನ್ನಡೆದು ಶಿರಚ್ಛೇದಿಸಲ್ಪಟ್ಟ ಕುರಿಯಂತೆ ಎತ್ತರವಾದ ಇಗರ್ಜಿಗೆ ಧಕ್ಕೆಹೊಡೆದುದರ ಪರಿಣಾಮವಾಗಿ ಕಟ್ಟಡವು ಚೂರು ಚೂರಾಗಿ ಅದರ ಗೋಡೆಯ ತುಂಡುಗಳು ದೆಸೆದೆಸೆಗಳಿಗೆ ಪ್ರಚಂಡ ರಭಸದಿಂದ ಹಾರಿದವು. ಹತೋಟಿಯಿಲ್ಲದ ಯಂತ್ರವು ಸಿಕ್ಕಾಬಟ್ಟೆ ಅಲೆದಾಡಿ ಕೊನೆಗೆ ಸಮೀಪದ ನದಿಯಲ್ಲಿ ಬಿದ್ದುಬಿಟ್ಟಿತು.

* * *

### ಪ್ರಚಂಡ ಸ್ಫೋಟನ!

ವಾಯುಮಂಡಲದಲ್ಲಿ ಪ್ರಚಂಡ ಸ್ಫೋಟನವಾಯಿತು. ನೂರಾರು ಮೈಲು ಎತ್ತರಕ್ಕೆ ನದಿಯ ನೀರು, ಕೆಸರು, ಹೊಗೆ ಮತ್ತು ಲೋಹದ ಚೂರು ಹಾರಿದುವು. ಅರೆನಿಮಿಷದಲ್ಲಿ ಅತ್ಯಂತ ದೊಡ್ಡದಾದೊಂದು ಕೆಸರಿನ ಪ್ರವಾಹದಲೆಯು ಭೂಮಿಯ ಪುಡಿಯನ್ನು ಅಪ್ಪಳಿಸಿತು. ಜನರು ನದಿಯ ದಡದೆಡೆಗೆ ಸರಿಯುತ್ತಿದ್ದರು. ಮಂಗಳೀಯ ಪ್ರಾಣಿಯು ತನ್ನ ಅಂತಿಮಾವಸ್ಥೆಯಲ್ಲಿ ಕೂಗುವಾಗ ಮನುಷ್ಯಕೋಟಿಯು ಬೆದರಿ ಚೀರುತ್ತಿದ್ದುದು ಕೇಳಿಸುತ್ತಿತ್ತು. ಉಳಿದ ಮಂಗಳೀಯ ಪ್ರಾಣಿಗಳು ನದಿಯ ದಡಕ್ಕೆಬಂದು ಅಂತಿಮಾವಸ್ಥೆಯಲ್ಲಿ ಚಡಪಡಿಸುತ್ತಿದ್ದ ತಮ್ಮ ಸಹೋದರ ಪ್ರಾಣಿಯನ್ನು ಕಂಡು ಮರುಗುತ್ತಿದ್ದುವು.

* * *

### ಉಷ್ಣ ಕಿರಣ.

ಮಂಗಳೀಯ ಪ್ರಾಣಿಗಳು ಕೂಡಲೆ ತಮ್ಮ ಉಷ್ಣಕಿರಣದ ಸಾಧನಗಳನ್ನು ಹಿಡಿದು ಅವುಗಳ ಪ್ರಚಂಡ ತಾಪದ ಕಿರಣಗಳನ್ನು ಪೇಟೆ ಪಟ್ಟಣ, ಹಳ್ಳಿ ಗುಡ್ಡೆಗಳ ಮೇಲೆ ಚೆಲ್ಲಲಾರಂಭಿಸಿದುವು. ಆ ಕಿರಣದ ದೆಸೆಯಿಂದ ಮನೆಮಠಗಳು ಕರಗಿ ನೀರಾದುವು. ಕೆಲವೆಡೆಗಳಲ್ಲಿ ಪ್ರಚಂಡ ಅಗ್ನಿಯು ತಲೆದೋರಿತು. ಮರಗಳು ಸಿಟಿಸಿಟಿಲೆಂದು ಶಬ್ದಮಾಡುತ್ತಾ ಭಸ್ಮೀಭೂತವಾದುವು.

### ಸಾವಿನ ಹೊಗೆ!

ಮಂಗಳೀಯ ಪ್ರಾಣಿಗಳು ಭೂಲೋಕವನ್ನು ನಾಶಗೊಳಿಸಲು ನಾನಾ ಯಂತ್ರ ಸಾಧನಗಳನ್ನು ತಂದಿದ್ದುವು. ಉಷ್ಣಕಿರಣಕ್ಕಿಂತಲೂ ಭಯಂಕರವಾದ ಇನ್ನೊಂದು ಸಾಧನವು ಎಲ್ಲೆಲ್ಲಿಯೂ ಸಾವಿನ ಮಳೆಗರೆಯಿತು. ಆ ಪ್ರಾಣಿಗಳು ವಿಚಿತ್ರ ರೀತಿಯ ಕೊಳವೆಗಳನ್ನು ಕೋವಿಗಳಂತೆ ಉಪಯೋಗಿಸುತ್ತಿದ್ದುವು. ಬಹಳ ಭಾರವಾದ ಹೊಗೆ, ಮತ್ತು ಆವಿಯು ಆ ಕೊಳವೆಗಳಿಂದ ಹೊರಗೆ ಬರುತ್ತಿತ್ತು. ಗುಡ್ಡಕಾಡುಗಳೆನ್ನದೆ, ನದಿನದಗಳೆನ್ನದೆ ಎಲ್ಲೆಡೆಗಳಲ್ಲಿಯೂ ಈ ಭಯಂಕರ ಹೊಗೆಯು ಹಬ್ಬಿಕೊಂಡಿತು. ಜ್ವಾಲಾಮುಖಿಯಿಂದ ಕರಗಿದ ಲೋಹ, ಕಲ್ಲು, ಮಣ್ಣುಗಳ ಬಿಸಿ ಪ್ರವಾಹವು ಜಗತ್ತಿನ ಪ್ರಾಣಿಕೋಟಿಗಳನ್ನು ಮರಣಕ್ಕೀಡುಮಾಡುವಂತೆ ಈ ಹೊಗೆಯು ಎಲ್ಲಾ ಪ್ರಾಣಿಗಳನ್ನು ಕೊಂದಿಕ್ಕಿತು.

* * *

ಅದೋ! ನಭೋಮಂಡಲದಲ್ಲಿ ಸುತ್ತಿ ಸುಳಿಯುವ ಹೊಗೆ! ಪ್ರಚಂಡ ಬಿರುಗಾಳಿಯಂತೆ ಒಮ್ಮೆ ಭೂಮಿಯ ತಳದಲ್ಲಿ ಚಲಿಸಿದರೆ ಇನ್ನೊಮ್ಮೆ ಮಹಾ ಕಟ್ಟಡದಂತೆ ಕಪ್ಪುಕಪ್ಪಾದ ಧೂಮ್ರರಾಶಿಯು ಆಕಾಶಮಂಡಲವನ್ನು ಮುತ್ತುತ್ತಿದೆ. ಸೊಯ್ಯನೆ ಸುಳಿದಾಡುತ್ತಿರುವ ಭೀಕರವಾದ ವಿಚಿತ್ರ ಧೂಮ್ರರಾಶಿಯು ನಿಷ್ಕರುಣೆಯಿಂದ ಏಕಪ್ರಕಾರವಾಗಿ ಸಾವಿನ ಮಳೆಗರೆಯುತ್ತಿದೆ! ಪ್ರಾಣಿಗಳು, ಮನುಷ್ಯರು ಪ್ರಾಣದಾಶೆಯಿಂದ ಆ ಮಬ್ಬಿನಲ್ಲಿ ಓಡುತ್ತಿದ್ದಾರೆ, ಅದೋ! ಚೀರುತ್ತಿದ್ದಾರೆ,

ಎಡವಿ ಬೀಳುತ್ತಿದ್ದಾರೆ, ಕೋವಿಗಳು ಗಾಳಿಯಲ್ಲಿ ಹಾರುವ ಹುಲ್ಲುಗಳಂತೆ ಅತ್ತಿತ್ತ ಹಾರುತ್ತಿವೆ. ನೋಡಿರಿ, ನೂರಾರು ಸಲ್ಲಸಲ್ಲೆಯರು ಉಸಿರುಗಟ್ಟಿ ಬೀಳುತ್ತಿದ್ದಾರೆ. ಧೂಮ್ರಮಯ ಬಿರುಗಾಳಿಯು ಬೀಸುತ್ತಿದೆ. ಕತ್ತಲು, ಪ್ರಳಯ! ನೀರವ, ನಿಶ್ಶಬ್ದ! ಎಲ್ಲೆಲ್ಲಿಯೂ ಧೂಮ್ರರಾಶಿ! ಧೂಮ್ರವಲ್ಲದೆ ಮತ್ತಾವದೂ ಕಾಣಿಸುವುದಿಲ್ಲ!

***

**ಗೊಂದಲ!**

ಭೀತಿಯ ಪ್ರಚಂಡ ಪ್ರವಾಹವು ಜಗತ್ತಿನ ಮೂಲೆಮೂಲೆಗಳಿಗೆ ಹರಿಯಿತು. ಅದರ ಅಲೆಗಳು ಕೋಟಿಗಟ್ಟಲೆ ಜನರ ಹೃದಯಗಳನ್ನು ಅಪ್ಪಳಿಸಿದುವು. ರೈಲ್ವೇ ನಿಲ್ದಾಣಗಳಲ್ಲಿ ಜನರು ಎಲ್ಲಿಗಾದರೂ ಹೋಗಲಿಕ್ಕಾಗಿ ವಿಶೇಷ ಗಲಭೆಯಿಂದ ನುಗ್ಗುತ್ತಿದ್ದರು. ಹಡಗಗಳು ಜನರಿಂದ ತುಂಬಿದ್ದುವು! ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ-ಎಲ್ಲೆಡೆಗಳಿಗೂ ಜನರು ಭಯವಿಹ್ವಲರಾಗಿ ಮುನ್ನಡೆದರು. ಪೋಲೀಸ್ ಸಂಸ್ಥೆಗಳಿಗೆ ಈ ಗೊಂದಲವನ್ನು ಹತೋಟಿಗೆ ತರಲಾಗದೆ ಅವರೂ ಅವ್ಯವಸ್ಥೆಯ ಶರಧಿಯಲ್ಲಿ ಮುಳುಗಿದರು.

***

**ವಿಷದ ಮುಗಿಲು!**

ಝಗಝಗಿಸುವ ಮಂಗಳೀಯರು ಎಲ್ಲೆಡೆಗಳಲ್ಲಿಯೂ ವಿಷದ ಮುಗಿಲನ್ನು ಹಬ್ಬಿಸಿದರು. ಜನರೆಲ್ಲಾ ಮೃತ್ಯುಪಾಲಾದ ಭೂವಿಭಾಗಗಳನ್ನು ಕೈವಶಪಡಿಸಿಕೊಂಡರು. ಜನರನ್ನು ನಿರ್ನಾಮಗೊಳಿಸಿದರು. ವಿರೋಧವೇ ಇರಬಾರದೆಂಬ ಅಭಿಪ್ರಾಯವು ಅವರಲ್ಲಿದ್ದಿರಬೇಕು. ಕ್ರಮೇಣ ನಮ್ಮ ಭೂಮಿಯು ತನ್ನ ಮೊದಲಿನ ರೂಪವನ್ನು ಕಳೆದುಕೊಂಡಿತು. ಬೇರೆ ಗ್ರಹಗಳ ರೂಪವನ್ನು ತಾಳಿತು. ಹಸನಾದ ಪೈರು ಪಚ್ಚೆಗಳು ಮಾಯವಾದುವು. ಮನುಷ್ಯರಷ್ಟು ಎತ್ತರವಾದ ಕಳ್ಳಿ ಮುಳ್ಳಿನ ಗಿಡಗಳೂ ಎಲ್ಲೆಎಲ್ಲೆಗಳಲ್ಲಿ ತಲೆದೋರಿದುವು. ಮಂಗಳಗ್ರಹದ ಕೆಂಪು ಬಣ್ಣದ ದರ್ಭೆಯು ಭೂಮಿಯಲ್ಲಿಯೂ ಹಬ್ಬಿಕೊಂಡಿತು.

***

**ಭೀಕರ ಕೂಗು!**

"ಉಲಾ, ಉಲಾ, ಉಲಾ sss ಉಲಾ sss" ಈ ವಿಚಿತ್ರ ಕೂಗನ್ನು ಕೇಳಿ ನನಗೆ ಅಚ್ಚರಿಯೆನಿಸಿತು. ಭಸ್ಮೀಭೂತವಾದ ನಗರಗಳ ಹಾಳು ಪ್ರದೇಶವು ಕತ್ತಲುಮಯವಾಗಿತ್ತು! ಆ ಭಯಂಕರ ಮರುಭೂಮಿಯು ನಿರ್ಜನವಾಗಿ ನಿಶ್ಶಬ್ದವಾಗಿತ್ತು! ಹೊಗೆಯಿಂದ ತುಂಬಿದ ಹಾಳುಬಿದ್ದ ಮನೆಗಳು ಮಸುಕು ಮಸುಕಾಗಿ **ಕಾಣಿಸು**ತಿದ್ದವು. ಕೆಂಪು ವರ್ಣದ **ದರ್ಭೆ**ಯು ಎಲ್ಲೆಡೆಗಳಲ್ಲಿಯೂ **ಬೆಳೆದು** ದೃಶ್ಯದ ಭೀಕರತೆಯನ್ನು **ಹೆಚ್ಚಿ**ಸಿತ್ತು!

***

**ದಿಙ್ಮೂಢನಾದೆ**

ಭಯನಿಗೂಢಗಳ ಜನನಿಯಾದ ನಿಶಾದೇವಿಯು ಏಕಪ್ರಕಾರವಾಗಿ ಮುನ್ನಡೆಯುತ್ತಿದ್ದಳು. **ಹಾಳು**ಬಿದ್ದ ನಗರಗಳು ನನ್ನನ್ನು **ಎವೆ**ಯಿಕ್ಕದೆ ನೋಡುತ್ತಿದ್ದವು. **ಕಟ್ಟಡ**ಗಳ ಕಿಟಕಿಗಳು ಮನುಷ್ಯಕಪಾಲದ ಗೂಡಿನ ಕಣ್ಗುಂಡಿಗಳಂತೆ ಕಾಣಿಸುತ್ತಿದ್ದವು. ನೀರವ ವಾತಾವರಣದಲ್ಲಿ ನನ್ನ ಸುತ್ತುಮುತ್ತಲೂ ನೂರಾರು ಭೀಕರ ಶಕ್ತಿಗಳು ಸುಳಿದಾಡುತ್ತಿರುವವೆಂದು ನನಗೆ ಹೊಳೆಯಿತು. ಭಯವು ನನ್ನನ್ನು ಮುಗ್ಗುರಿಸಿತ್ತು. ಅದೊಂದು ತರದ ವಿಚಿತ್ರ ಪುಕ್ಕತನದ ಪ್ರಭಾವದಿಂದ ನಾನು ಬೆದರಿ ನಡುಗುತ್ತಿದ್ದೆ. ಬಹುದೂರದಲ್ಲಿ ಮುರಪಡೆಯಲ್ಲಿ ಅಸ್ತಂಗತನಾಗುತ್ತಿದ್ದ ಸೂರ್ಯನ ಕಿರಣಗಳು ಆ ಮಂಗಳೀಯನ ಶಿರದ ಮೇಲೆ ಬೀಳುತ್ತಿದ್ದುವು. ಭಯಗ್ರಸ್ತನಾಗಿ ಆ ಪ್ರಾಣಿಯ ಶಿರವನ್ನು ನೋಡುವಾಗ "ಉಲಾ, ಉಲಾ" ಎಂಬ ಶಬ್ದವು ಹೊರಗೆ ಬರುತ್ತಿತ್ತು. ಸ್ವಲ್ಪ ಹೊತ್ತಿನ ವರೆಗೆ ನಾನು ಎಡಬಿಡದೆ ನೋಡಿದೆ. ಚಲಿಸಲಿಲ್ಲ!

***

**ಆ ಭೀಕರ ರೂಪ**

ಇನ್ನೊಂದು ಪ್ರಾಣಿಯು ಬಳಿಸಾರಿದೆ; ಕದಲುವುದಿಲ್ಲ. ನಿಶ್ಶಬ್ದ!

ಏನಾದರೂ ಆಗಲಿ ಎಂಬ ಹುಚ್ಚು ನಿರ್ಣಯವನ್ನು ಮಾಡಿಕೊಂಡು ಮತ್ತಷ್ಟು ಸಮೀಪಕ್ಕೆ ತೆರಳಿದೆ. "ಸತ್ತರೆ ಹೋಗಲಿ. ನಾನೇ ಸತ್ತುಕೊಳ್ಳುವದಕ್ಕಿಂತ ಅದೇ ನನ್ನನ್ನು ಕೊಲ್ಲಲಿ" ಎಂದುಕೊಂಡು ಮುನ್ನಡೆದೆ. ಸಮೀಪಕ್ಕೆ ತೆರಳಿದೊಡನೆಯೇ ಅದರ ತಲೆಯನ್ನು ನೋಡಿದೆ. ನೂರಾರು ಕಪ್ಪುಪಕ್ಷಿಗಳು ಅದರ ತಲೆಯು ಸುತ್ತಲೂ ಸುಳಿದಾಡುತ್ತಿದ್ದುವು. ಅಯ್ಯೋ! ಆ ಭಯಾನಕ ನೋಟ. ಭಯದಿಂದ ಇಡೀ ದೇಹವು ನಡುಗಲಾರಂಭಿಸಿತು. ಜೀವದಾಶೆಯಿಲ್ಲದೆ ಸಾಧ್ಯವಾದಷ್ಟು ವೇಗವಾಗಿ ಮುನ್ನಡೆದೆ. ಆ ಗುಡ್ಡಗಳ ತುದಿಯಲ್ಲಿ ಲಕ್ಷೋಪಲಕ್ಷ ಜೀವಿಗಳು ಸತ್ತು ಬಿದ್ದಿದ್ದುವು. ಮತ್ತಷ್ಟು ಧೈರ್ಯವನ್ನು ತಂದುಕೊಂಡು ಮುಂದೆ ಹೋದೆ. ಗುಡ್ಡವೇರಿದಂತೆ ಆ ಪ್ರಾಣಿಯ ರೂಪವನ್ನು ಮತ್ತಷ್ಟು ಸೂಕ್ಷ್ಮವಾಗಿ ನೋಡಿದೆ. ತಲೆಯಿಂದ ನೇತಾಡುತ್ತಿದ್ದ ರುಂಡಗಳೊಳಗಿನ ಮೆದುಳನ್ನು ಹಕ್ಕಿಗಳು ಕುಕ್ಕಿ ತಿನ್ನುತ್ತಿದ್ದುವು.

* * *

ಅಂತಾಸಿನಲ್ಲಿ ನಾನು ಎತ್ತರವಾದೊಂದು ಮಣ್ಣರಾಶಿಯನ್ನೇರಿದೆ. ಅಲ್ಲಿ ನಿಂತಿದ್ದ ಮಂಗಳೀಯ ಪ್ರಾಣಿಗಳು ಸತ್ತಿದ್ದುವು. ಸುತ್ತಲೂ ಯುದ್ಧಸಾಧನಗಳು. ಕೋವಿ, ಮೆಶಿನ್ ಗನ್, ಬೋಂಬು! ಸಾವನ್ನುಂಟುಮಾಡುವ (*Bacteria*) ಅಣುಗಳ ತಿವಿತವನ್ನು ತಡೆಯಲು ಆ ಮಂಗಳೀಯರಿಗೆ ಸಾಧ್ಯವಾಗಲಿಲ್ಲ ಮನುಷ್ಯಯತ್ನವು ನಿಷ್ಫಲವಾಗಿ ಕೊನೆಗೆ, ಜಗತ್ತಿನ ಅತ್ಯಂತ ಚಿಕ್ಕ ಅಣುಗಳು ಆ ಮಹಾ ಮಂಗಳೀಯ ಪ್ರಾಣಿಗಳನ್ನು ಕೊಂದವು. ಮಂಗಳೀಯ ಜೀವಿಗಳು ಸತ್ತುಕೊಳೆಯುತ್ತಿದ್ದವು. ಅಸಂಖ್ಯಾತ ಜನರು ಸಾವಿನ ದವಡೆಗೆ ಸಿಲುಕಿಯಾದರೂ ತಮ್ಮ ಭೂಮಿಯನ್ನು ರಕ್ಷಿಸಲು ಯತ್ನಿಸಿದರು. ಅಸಂಖ್ಯಾತ ಮಂಗಳೀಯರು ಬಂದರೂ ಮಾನವನು ತನ್ನ ಭೂಮಿಯನ್ನು ಬಿಟ್ಟುಕೊಡುವಂತಿಲ್ಲ. ಮಾನವರ ಸಾವು ಬದುಕುಗಳು ನಿಷ್ಪ್ರಯೋಜಕವಲ್ಲ!

---








# ಪ್ರಥಮ ಬಹುಮಾನ:- ರೂಪಾಯಿ ೨೫. [ನಗದಿ.]

ದ್ವಿತೀಯ ಬಹುಮಾನ ರೂಪಾಯಿ ೫ (ಪುಸ್ತಕಗಳು.)
ತೃತೀಯ ಬಹುಮಾನ ರೂಪಾಯಿ ೧೦ (ಪುಸ್ತಕಗಳು.)

✓ ಈ ಸ್ಪರ್ಧೆಯ ಉತ್ತರವು ಅಂತರಂಗದ ಸಂಪಾದಕರ ಬಳಿ ಮೊಹರು ಮಾಡಿಡಲಾಗಿದೆ.

✓ ಅದಕ್ಕೆ ಪ್ರತಿ ಅಕ್ಷರವೂ ಸರಿಹೋಲುವ ಉತ್ತರಕ್ಕೆ ಪ್ರಥಮ ಬಹುಮಾನವೂ, ಒಂದು ಮತ್ತು ಎರಡು ತಪ್ಪಿರುವವುಗಳಿಗೆ ಎರಡು ಮತ್ತು ಮೂರನೆ ಬಹುಮಾನಗಳೂ ಕೊಡಲ್ಪಡುವುವು.

ಬಹುಮಾನ ಪುಸ್ತಕಗಳ ಪಟ್ಟಿಯನ್ನು ಉತ್ತರ ಪ್ರಕಟಿಸುವ ಸಂಚಿಕೆಯಲ್ಲಿಯೇ ಕೊಡಲಾಗುವುದು. ಅದರಲ್ಲಿ ಆರಿಸಿ ಯಾವುದನ್ನಾದರೂ ಪಡಕೊಳ್ಳಬಹುದು.

✓ ಬಹುಮಾನಕ್ಕೆ ಯೋಗ್ಯವಾದ ಉತ್ತರಗಳು ಒಂದಕ್ಕಿಂತ ಹೆಚ್ಚಾದಲ್ಲಿ ಮೇಲ್ಕಂಡ ಬಹುಮಾನಗಳು ಎಲ್ಲರಿಗೂ ಸರಿಸಮಾನವಾಗಿ ಹಂಚಲ್ಪಡುವುವು.

✓ ಬಹುಮಾನವನ್ನು ಹಂಚುವ ವಿಚಾರ ಸ್ಪರ್ಧೆಯ ಮೆನೇಜರರಿಗೆ ಸೇರಿದೆ. ಈ ವಿಚಾರದಲ್ಲಿ ಯಾವ ಪತ್ರವ್ಯವಹಾರಗಳಿಗೂ ಅವಕಾಶವಿಲ್ಲ.

● ಪ್ರತಿ ಉತ್ತರಕ್ಕೂ ಪ್ರವೇಶಧನ ನಾಲ್ಕಾಣೆ.

● ಒಬ್ಬನು ಎಷ್ಟೂ ಉತ್ತರಗಳನ್ನು ಕಳುಹಿಸಬಹುದು. ಒಂದು ರೂಪಾಯಿಗೆ ಐದು ಉತ್ತರಗಳನ್ನು ಕಳುಹಿಸಬಹುದಾಗಿದೆ.

ಗೆಳೆಯರ ತಂಡದ ಸದಸ್ಯರು ಒಂದು ರೂಪಾಯಿಗೆ ಎಂಟು ಉತ್ತರಗಳನ್ನು ಕಳುಹಿಸಬಹುದು.

● ಪ್ರವೇಶ ಧನವನ್ನು ಪೋಸ್ಟಲ್ ಸ್ಟಾಂಪು, ಇಂಡಿಯನ್ ಪೋಸ್ಟಲ್ ಆರ್ಡರ್ ಅಥವಾ ಮನಿ ಆರ್ಡರ್ ಮೂಲಕ ರವಾನಿಸಬಹುದು.

● ಉತ್ತರವನ್ನು ಬರೆಯುವವರು ಜನವರಿ ೮ರೊಳಗೆ ಬರೆದು ಕಳುಹಿಸಬೇಕು. ನಂತರ ಈ ಸ್ಪರ್ಧೆಗಾಗಿ ಕಳುಹಿಸುವ ಉತ್ತರಗಳನ್ನು ಸ್ವೀಕರಿಸುವುದಿಲ್ಲ.

● ಸರಿಯಾದ ಉತ್ತರವನ್ನು ಜನವರಿ ೧೫ರ "ಅಂತರಂಗ"ದಲ್ಲಿ ಪ್ರಕಟಿಸಲಾಗುತ್ತದೆ.

**ಈ ಸ್ಪರ್ಧೆಯ ಉತ್ತರಗಳು ಅಂತರಂಗದ ಕೂಪನಿನಲ್ಲಿಯೇ ಬರೆಯಲ್ಪಡಬೇಕು.**
**ಈ ಕೂಪನುಗಳು ದಶಂಬರ ತಿಂಗಳ ಸಂಚಿಕೆಗಳಲ್ಲಿ ಪ್ರಕಟಿಸಲ್ಪಡುತ್ತವೆ.**
**ಉತ್ತರ ಕೊಡುವವರು ತಮ್ಮ ಪೂರ್ಣ ವಿಳಾಸವನ್ನು ಬರೆಯತಕ್ಕದ್ದು.**

**ಮೆನೇಜರ್, ಅಂತರಂಗ ಸ್ಪರ್ಧೆ, ಉಡುಪಿ.**

Printed and published by P. Venkataramanacharya for and on behalf of SUPPLY AGENCY LTD., at Manipal Power Press, Udipi.

|  |  |  |  |  |  |  |
|---|---|---|---|---|---|---|
| ೧ | ೨ | ೩ | ■ | ೪ | ೫ | ೬ |
| ೭ | ■ | ■ | ೮ | ■ | ■ | ೯ |
| ೧೦ | ■ | ೧೧ | ೧೨ | ೧೩ | ■ | ೧೪ |
| ■ | ೧೫ | ೧೬ | ■ | ೧೭ | ೧೮ | ■ |
| ೧೯ | ■ | ೨೦ | ೨೧ | ೨೨ | ■ | ೨೩ |
| ೨೪ | ■ | ■ | ೨೫ | ■ | ■ | ೨೬ |
| ೨೭ | ೨೮ | ೨೯ | ■ | ೩೦ | ೩೧ | ೩೨ |

**ಎಡದಿಂದ ಬಲಕ್ಕೆ:—**

೧ರಿಂದ ೩ ನೇತ್ರೆಯರನ್ನು ಪುರುಷರು ಮೆಚ್ಚುತ್ತಾರೆ.

೪ ,, ೬ ಷಟ್ಪದಿಗಳಲ್ಲೊಂದು.

೧೧ ,, ೧೩ ಪಾಪಿಗಳು . . . ಕ್ಕೆ ಹೋಗುವರೆಂದು ಸಾಮಾನ್ಯ ಜನರ ನಂಬಿಗೆ.

೧೫ ,, ೧೬ ಯಶಸ್ಸು.

೧೭ ,, ೧೮ ಉಪ್ಪಿಗಿಂತ. . . . . ಇಲ್ಲ ತಾಯಿಗಿಂತ ಬಂಧುವಿಲ್ಲ.

೨೦ ,, ೨೨ ರೋಗಿಗಳು . . . . .ತ್ತಾರೆ.

೨೭ ,, ೨೯ ನಾಟಕದಲ್ಲಿ ಇದು ಮುಖ್ಯ.

೩೦ ,, ೩೨ ಜ್ಞಾನವುಂಟಾಗಬೇಕಾದರೆ ಬುದ್ಧಿ . . . ವಾಗಬೇಕು.

---

**ಮೇಲಿನಿಂದ ಕೆಳಗೆ: —**

೧ರಿಂದ೧೦ ಶರಧಿ.

೧೯ ,, ೨೭ ಕಾಯಿದೆ.

೮ ,, ೧೨ ಕೋಗಿಲೆಯು . . . ವೃಕಂಪೆಂದು ಕವಿಗಳು ವರ್ಣಿಸುತ್ತಾರೆ.

೧೧ ,, ೨೦ ಕರ್ನಾಟಕವು . . . .ಮನೋಹರವಾದ ನೈಸರ್ಗಿಕ ದೃಶ್ಯಗಳಿಂದ ಕೂಡಿದೆ.

೨೧ ,, ೨೫ ಸೂರ್ಯ.

೧೩ ,, ೨೨ ಇದು ಹೊಟ್ಟೆಯೊಳಗಿದೆ.

೬ ,, ೧೪ ಹೆಚ್ಚಿನವರು ಇದನ್ನು ಬೆದರುತ್ತಾರೆ.

೨೩ ,, ೩೨ ಜವಾಹರಲಾಲರು ಯುರೋಪಿನ . . . . ವನ್ನು ಮುಗಿಸಿ ಬಂದಿದ್ದಾರೆ.

---

ನೀವು ಓದು ಬರಹ ಬಲ್ಲವರಲ್ಲವೆ? -

ಹಾಗಾದರೆ

# 'ಅಂತರಂಗ' ವಾರಪತ್ರಿಕೆಯ

ಹೆಸರನ್ನು ಈಗಾಗಲೇ ತಿಳಿದಿರಬೇಕು!

ಸವಿಯನ್ನು ಈಗಾಗಲೇ ಅರಿತಿರಬೇಕು.

ನಿಮ್ಮ ನಚ್ಚಿನ-ಮೆಚ್ಚಿನ

'ಅಂತರಂಗ' ಪತ್ರಿಕೆಯನ್ನು

ಪುಕ್ಕಟೆಯಾಗಿ ಒದಗಿಸಬಲ್ಲ ಯೋಜನೆ -

# ಅಂತರಂಗ
# ಡಿಪಾಜಿಟ್ ಯೋಜನೆ

ನೀವು ಠೇವಣಾತಿಯಿಡುವ
ಬರೇ ರೂಪಾಯಿ ನೂರಕ್ಕೆ



ಸೇಕಡಾ 4ರ ಸಲೆಯು ಬಡ್ಡಿ
ಅಂತರಂಗದ ಪುಕ್ಕಟೆ ಪ್ರತಿಗಳು

ಈ ಸುವರ್ಣ ಸಂದರ್ಭವನ್ನು ಕಳಕೊಳ್ಳಬೇಡಿರಿ.

**FINANCE DEPARTMENT**

# SUPPLY AGENCY LIMITED
# UDIPI

ಸಪ್ಲೈ ಏಜನ್ಸಿ ಲಿಮಿಟೆಡ್ ಉಡುಪಿ